# — ಸಪ್ಲೈ ಏಜನ್ಸಿ ಲಿಮಿಟೆಡ್ —

## ಉಡುಪಿ.

ಹೆಡ್ ಆಫೀಸ್:
ಬೊಬ್ಬಯ ಜಂಕ್ಷನ್



ಫೈನಾನ್ಸ್ ಡಿಪಾರ್ಟಮೆಂಟ್:
ವ್ಯಾಸ ಭವನವು

**ನಿರಖು ಠೇವಣಾತಿಗಳಿಗೆ**
**ಬಡ್ಡಿಯ ದರಗಳು:**

| | | | | | |
|---|---|---|---|---|---|
| ೪ | ರಿಂದ | ೬ | ತಿಂಗಳ ವರೆಗೆ | ಸೇಕಡಾ | ೪. |
| ೭ | ,, | ೧೧ | ,, | ,, | ೫ |
| ೧೨ | ,, | ೧೮ | ,, | ,, | ೬ |

ಎರಡು ವರ್ಷಕ್ಕೆ ಮಿಕ್ಕಿದ ಠೇಣಾತಿಗಳಿಗೆ ಪ್ರತ್ಯೇಕ ದರಗಳಿವೆ—ಬರೆದು ತಿಳಿಯಬಹುದು.



**ಅಂತರಂಗ ಡಿಪಾಜಿಟ್:**

೧೦೦ ರೂಪಾಯಿಗಳ ಒಂದೇ ಒಂದು ಡಿಪಾಜಿಟಗೆ ಎರಡೆರಡು ತೆರನಾದ ಉಪಯೋಗ:
ನಿಮ್ಮ ಹಣಕ್ಕೆ ಸೇಕಡಾ ೪ರಂತೆ ಬಡ್ಡಿ ಅಲ್ಲದೆ "ಅಂತರಂಗ" ಪತ್ರಿಕೆಯ ಪ್ರತಿಗಳು ಮುಫತ್ತಾಗಿ ನಿಮಗೆ ತಲಪುವುವು—



**ದೀನಬಂಧುನಿಧಿ, ಇಂಡಸ್ಟ್ರಿಯಲ್ ಡಿಪಾಜಿಟ್, ಇಂಡಸ್ಟ್ರಿಯಲ್ ಕೇಶ್ ಸರ್ಟಿಫಿಕೇಟುಗಳು, "ಸೇವ್ ಏಸ್ ಯು ಪ್ಲೀಸ್" ಇತ್ಯಾದಿ ನವೀನ ಯೋಜನೆಗಳ ಮಾಹಿತಿಗೆ ಬರೆಯಿರಿ—**

ಮನೇಜರ್,
ಫೈನಾನ್ಸ್ ಡಿಪಾರ್ಟಮೆಂಟ್,
ವ್ಯಾಸ ಭವನವು.



ಸಪ್ಲೈ ಏಜನ್ಸಿ ಲಿಮಿಟೆಡ್,
ಉಡುಪಿ.

This page is available for advertisement. Rate Rs. 15/- (per insertion.)

# ANTARANGA ❖ ಅಂತರಂಗ

**UDIPI — ಉಡುಪಿ.**

KANARESE WEEKLY MAGAZINE

Proprietors: Supply Agency Limited, Udipi
Printed at the Manipal Power Press, Manipal, Udipi

ವರ್ಷ ೧. ಆದಿತ್ಯವಾರ. ೨೭, ೧೯೩೮. ಸಂಚಿಕೆ ೨೦.




---

**ವಾರ್ಷಿಕ ಚಂದಾ: ಮೂರು ರೂಪಾಯಿ.**
**ಬಿಡಿ ಸಂಚಿಕೆ: ಒಂದಾಣೆ**

**ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.**

---

# ಅಂತರಂಗ

### ಇಪಿ ಫಕೀರರ ಸಂಧಾನ.

ಇಪಿ ಫಕೀರರೇ ಮೊದಲಾದ 'ದಂಗೆಗಾರ' ಧುರೀಣರು ಸಂಧಾನಕ್ಕೆ ಸಿದ್ಧರಾಗಿಲ್ಲವೆಂದು ವಿದೇಶ ಕಾರ್ಯದರ್ಶಿ ಸರ್. ಆಬರಿ ಮೆಟ್ ಕಾಫ್ ರವರ ಮೊರೆ.

ಪಾಪ, ಇಪಿ ಫಕೀರರಿಗೆ ಮಾನಹಾನಿಮಾಡಿಕೊಳ್ಳುವ ಚೇಂಬರ್ಲೆನರ 'ಸಂಧಾನ' ವಿಧಾನವು ತಿಳಿದಿರಲಿಕ್ಕಿಲ್ಲ!

---

### ಸರ್ವಶಕ್ತ ಸೊನ್ನೆ

ಕೇಂದ್ರ ಸರಕಾರದ ಬೊಕ್ಕಸದಲ್ಲಿ ಹಣವಿಲ್ಲವೆಂದು ಸರ್ ಜೇಮ್ಸ್ ಗ್ರಿಗ್ಗರ ಮೊರೆ.

ಇದೇನು ದೊಡ್ಡ ವಿಚಾರ? ಆ ದಿನ ಎಲ್ಲರ ಕಣ್ಣಿನಿಂದ ತಪ್ಪಿಸಿಕೊಂಡು ಆಯವ್ಯಯ ಪಟ್ಟಿಯಲ್ಲಿ ಅಧಿಕಾರವಿಲ್ಲದೆ ಸೇರಿಕೊಂಡ ರೂ. ೦-೦-೦ ಅಥವಾ ಸೊನ್ನೆಯನ್ನು ಲೆಕ್ಕಕ್ಕೆ ಸೇರಿಸಿಕೊಳ್ಳಬಾರದೇ?

---

### ನಲುವತ್ತು ಸಹಸ್ರದ ವರದಿ

ವಿದುರಾಶ್ವತ್ಥ ವರದಿಗೆ ನಲವತ್ತು ಸಹಸ್ರ ರೂಪಾಯಿಗಳು ವೆಚ್ಚವಾದುವಂತೆ.

ಇಷ್ಟು ವೆಚ್ಚಮಾಡಿ ಸಿಕ್ಕಿರುವ ಸತ್ಯಾಂಶವೆಷ್ಟೆಂದು ವಿದುರಾಶ್ವತ್ಥದ ವಿದುರ ನಾರಾಯಣನಿಗೇ ಗೊತ್ತು! ಈ ಹಣವನ್ನು ವಿದುರಾಶ್ವತ್ಥದಲ್ಲಿ ಮೃತಪಟ್ಟವರಿಗೆ ಕೊಟ್ಟಿದ್ದರೆ ಉಪಕಾರವಾಗುತ್ತಿತ್ತೆಂದು ಹೇಳುವದು ನ್ಯಾಯವಾದರೂ, ನ್ಯಾಯಕ್ಕೆ ಈಗ ಬೆಲೆಯೆಲ್ಲಿದೆಯೆಂಬುದು ಗಣನೀಯ ಪ್ರಶ್ನೆಯಲ್ಲವೆ?

---

## ರಸಿಕ-ರಂಜನೆ



ಸೇಟ್ ಜಮ್ನಾಲಾಲ್ ಬಜಾಜರು ತ್ರಿಪುರ ಕಾಂಗ್ರೆಸ್ ಅತ್ಯಂತ ಯಶಸ್ವಿಯಾಗುವಂತೆ ಶತಪ್ರಯತ್ನಗಳನ್ನು ಮಾಡುತ್ತಿದ್ದಾರೆ.

### ಒಪ್ಪಂದದ ಸುದ್ದಿ

ಮೈಸೂರಲ್ಲಿ ಕಾಂಗ್ರೆಸ್-ಸರಕಾರಗಳೊಳಗೆ ಒಪ್ಪಂದವಾದರೂ ಹಿಂದಿನ ಜುಲ್ಮಾನೆಗಳನ್ನು ಅಧಿಕಾರಿಗಳು ಈಗಲೂ ವಸೂಲು ಮಾಡುತ್ತಿರುವರಂತೆ.

ಪ್ರಾಯಶಃ ಒಪ್ಪಂದದ ಸುದ್ದಿಯು ಸರಕಾರೀ ಅಧಿಕಾರಿಗಳಿಗೆ ಇನ್ನೂ ಮುಟ್ಟಿರಲಿಕ್ಕಿಲ್ಲ.

---

### ನರಯಜ್ಞದ ದ್ವಿತೀಯಾಂಕ!

ತಿರುವಾಂಕೂರಿನ ನರಯಜ್ಞದ ಒಂದನೇ ವಿಭಾಗವು ಪೂರ್ತಿಯಾಗಿ ಎರಡನೆ ಅಂಕದ ಪರದೆಯು ತೆರೆಯಲ್ಪಟ್ಟಿದೆಯೆಂದು ವಾರ್ತೆ.

ಪ್ರಾಯಶಃ ವಿಲ್ಲಿಂಗ್ಡನ್ ರಾಮಸ್ವಾಮಿ ಅಯ್ಯರರು ತಮ್ಮ ವಜ್ರಮುಷ್ಟಿಯನ್ನು ಪುನಃ ಬಲಪಡಿಸಿಕೊಂಡು ಕಾಯಿದೆಗಳ ಬಿರುಸಾದ ಬಾಣವನ್ನು ಅಹಿಂಸಾತ್ಮಕ ಜನರ ಮೇಲೆ ಬಿಡಬಹುದು! ಸರಿ. ಕಲಿಯುಗದ ಮಹಾಭಾರತವಾಯಿತು.

---

### ಯುರೋಪಿಯಾನರ ನಿಸ್ವಾರ್ಥ

ಮೈಸೂರು ಸಂಸ್ಥಾನದ ಯುರೋಪಿಯನರಿಗೆ ಜವಾಬ್ದಾರೀ ಸರಕಾರವು ಬೇಡವೇ ಬೇಡವಂತೆ!

ಸರಿ ಸರಿ! ಬೇಜವಾಬ್ದಾರೀ ಸರಕಾರವಿದ್ದರೆ ತಮ್ಮ ಲಾಭಕ್ಕೇನೂ ತೊಂದರೆಯಿಲ್ಲವೆಂದು ಪೂರ್ಣವಾಗಿ ಅನುಭವ ಹೊಂದಿರುವ ಈ ಯುರೋಪಿಯಾನರು ಹಾಗೆ ಹೇಳಿರುವುದರಲ್ಲಿ ಆಶ್ಚರ್ಯವೇನು?

---

### ಮುಸಲ್ಮಾನರ 'ಗಮನ'

'ಮುಸಲ್ಮಾನ ಪ್ರಪಂಚದ ಗಮನವು ಕನ್ನಡ ಪ್ರಪಂಚದ ಕಡೆಗೆ ಇನ್ನೂ ಬಿದ್ದಿಲ್ಲ'ವೆಂದು 'ಕನ್ನಡನುಡಿ' ಹೇಳುತ್ತಿದೆ.

ಶೇಕಡಾ ೯೦ರಷ್ಟು ಮುಸಲ್ಮಾನರು ಇನ್ನೂ ಅಜ್ಞಾನವನ್ನು ಆಲಿಂಗಿಸಿಕೊಂಡಿರುವಾಗ ಗಮನವು ಬೀಳುವುದಾದರೂ ಹೇಗೆ? ಕರ್ನಾಟಕದ ಮುಸಲ್ಮಾನ ಪ್ರಪಂಚವು ತನ್ನನ್ನೇ ಮರೆತುಕೊಂಡಿರುವಾಗ ಜಗತ್ತಿನ ಇತರ ವಿಚಾರಗಳ ಕುರಿತು ಯೋಚಿಸುವುದಾದರೂ ಸಾಧ್ಯವೆ?

---

### ಇದೂ ಒಂದು ಮಾದರಿ!

ದಿವಂಗತರಾದ ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರ ದಿನವನ್ನು ಮೈಸೂರಿನವರು ಆಚರಿಸಲಿಲ್ಲವಂತೆ.

ಸಮಾಜಸೇವಕರನ್ನು ಮಾನ್ಯ ಮಾಡುವುದರಲ್ಲಿ ಕನ್ನಡಿಗರು ಎಷ್ಟು ಪ್ರವೀಣರೆಂಬುದನ್ನು ತೋರಿಸಲಿಕ್ಕಾಗಿ ಮಾತ್ರ ಅವರು ಸುಮ್ಮನೆ ಕುಳಿತಿರಬೇಕು!

---

### ೨೦ ಲಕ್ಷದ ದಬ್ಬಾಳಿಕೆ!

ಇಂಡಿಯಾ ಸರಕಾರವು ವಜೀರಸ್ಥಾನದ ದಬ್ಬಾಳಿಕೆಗಾಗಿ ೨೦ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿತಂತೆ!

ಬ್ರಿಟಿಷರ ಮೂರ್ಖತನವನ್ನು ಲೆಕ್ಕಿಸದೆ ಅವರು ಜರ್ಮನರ ಅನೀತಿಯನ್ನು ಖಂಡಿಸುತ್ತಾರೆಂದು ಹಿಟ್ಲರನ ಪ್ರಚಾರಮಂತ್ರಿ ಹೇಳಿರುವುದು ಈಗ ನಿಜವೆಂದಾಯಿತು.

---

### ವಿದೇಶೀ ಆಸ್ಫಾಲ್ಟ್.

ಆಸ್ಫಾಲ್ಟ್ (ಡಾಂಬರ್) ಮಾರ್ಗಗಳಿಗಿಂತ ಸಿಮೆಂಟ್ ಮಾರ್ಗಗಳು ಎಲ್ಲಾ ದೃಷ್ಟಿಯಿಂದ ಶ್ರೇಷ್ಠವಾದುವುಗಳೆಂದು ಸರ್. ಎಂ. ವಿಶ್ವೇಶ್ವರಯ್ಯನವರು ಹೇಳಿ ಬಹು ಕಾಲವಾಯಿತು.

**ವಿಶ್ವ ವೈಚಿತ್ರ್ಯ - - - - - - ನೀರಿನಡಿಯ ಜೇಡ**



ನೀರಿನಡಿಯಲ್ಲಿ ಸಂಚರಿಸುವ ಸಬ್‌ಮೆರಿನ್ ಜಾತಿಯ ಜೇಡರ ಬಲೆಯಿದು. ಇದು ತನ್ನ ದೇಹದ ವಿಚಿತ್ರಶಕ್ತಿನೂಲಿನಿಂದ, ನೀರು ತಾಗದಂತಹ ಒಂದು ಗೂಡನ್ನು ನೀರಿನೊಳಗೆಯೇ ಕಟ್ಟುತ್ತದೆ. ಬಿಳಿ ಬಣ್ಣದ ಗೂಡನ್ನು ಹುಲ್ಲಿನ ಬಳಿಯಲ್ಲಿ ಕಾಣಬಹುದು. ಅದರ ಸಮೀಪದಲ್ಲೇ ಜೇಡರ ಹುಳವಿದೆ. ಇಂತಹ ಮನುಷ್ಯರೂ ನೀರಿನಡಿಯಲ್ಲಿ ಇರಬಹುದೆ? ವಿಜ್ಞಾನದ ಬೆಳಕು ಆ ಕಡೆ ಇನ್ನೂ ಹರಿಯಲಿಲ್ಲ.

ಆಸ್ಫಾಲ್ಟನ್ನು ಪರದೇಶಗಳಿಂದ ತರಿಸಬೇಕಾಗಿದ್ದರೆ ಸಿಮೆಂಟು ಸ್ವದೇಶದಲ್ಲಿಯೇ ಸಿಗುತ್ತದೆ. ಆಸ್ಟ್ರೇಲಿಯಾ ಮೊದಲಾದೆಡೆಗಳಲ್ಲಿ ಸಿಮೆಂಟು ಮಾರ್ಗಗಳು ಧಾರಾಳವಾಗಿವೆ. ಈ ಕಡೆಗೆ ನಮ್ಮ ಸರಕಾರಗಳ ಲಕ್ಷ್ಯವು ಪ್ರಾಯಶಃ ಹರಿಯಲಾರಂಭಿಸಿದರೂ ಗುರಿಯನ್ನು ಮುಟ್ಟಿರಲಿಕ್ಕಿಲ್ಲ!

---

### ಕೊನೆಗೊಂದು ಠರಾವು!

ಆಂಧ್ರಪ್ರಾಂತ್ಯವಾದೊಡನೆಯೇ ಕರ್ನಾಟಕ ಪ್ರಾಂತ್ಯ ರಚನೆಯಾಗಬೇಕೆಂಬ ವರದಿಯು ಹೇಗಾದರೂ ದ. ಕ. ಜಿಲ್ಲಾ ಬೋರ್ಡಿನಲ್ಲಿ ಮಂಜೂರಾಯಿತು.

ಕನ್ನಡಮ್ಮನ ಭಾಗ್ಯೋದಯ ವಾದಂತಾಯಿತು. ಆದರೆ ಜಿಲ್ಲಾ ಬೋರ್ಡಿನ ಸಮೀಪದಲ್ಲಿರುವ ಮಂಗಳೂರು ಮ್ಯುನಿಸಿಪಾಲಿಟಿಯಲ್ಲಿ ಏಕೀಕರಣದ ಠರಾವು ಮುಂದೆ ಬಂದೊಡನೆಯೇ ಎಲ್ಲರಿಗೂ ಅಸಹ್ಯವಾಗಿ ಯಾರೂ ಅದನ್ನು ಅನುಮೋದಿಸಲಿಲ್ಲವಂತೆ. ಪ್ರಾಯಶಃ ದ. ಕ. ಕಾಂಗ್ರೆಸ್ ಪಕ್ಷದ ಮನೋವೃತ್ತಿಯು ಹವಾಮಾನದ ಮೇಲೆ ಹೊಂದಿಕೊಂಡಿರಬೇಕು.

---

### ಹೊಸ ದಾಖಲೆ!

ಹನ್ನೆರಡು ತಾಸಿನಲ್ಲಿ ಹನ್ನೊಂದು ಸಲ ಲಾಠೀ ಪ್ರಹಾರಮಾಡಿ ರಾಜಕೋಟ ಸಂಸ್ಥಾನದ ಸರಕಾರವು ದಬ್ಬಾಳಿಕೆಯ ದಾಖಲೆಯನ್ನೇ ಮುರಿದು ಬಿಟ್ಟಿದೆ.

ಈ ದಾಖಲೆಯನ್ನು ಮುರಿಯಲು ಮೂಲ ಕಾರಣನಾದ ಅಲ್ಲಿಯ ದಿವಾನ 'ಧೂರ್ತ ಶಿಖಾಮಣಿ' ಸರ್ ಪ್ಯಾಟ್ರಿಕ್‌ಕ್ಯಾಡಲ್ ಎಂಬ ಬ್ರಿಟಿಷರವನಿಗೆ ಭಾರತೀಯರು ಎಷ್ಟು 'ಋಣಿ'ಗಳಾಗಿರಬೇಕು!

—'ರಸಿಕ'

---

# ನಿಮ್ಮ ತಾರುಣ್ಯವನ್ನುಳಿಸಿರಿ!

## ಮುದಿತನವನ್ನು ಹೊಡೆದೋಡಿಸುವ ಮಹತ್ವದ ಉಪಾಯ

### ಪುರುಷರಿಗೂ ಸ್ತ್ರೀಯರಿಗೂ ಹೇಳಿಸಿದ ವ್ಯಾಯಾಮ

### ಸೂರ್ಯ ನಮಸ್ಕಾರಗಳ ಮಹತ್ವ

ನಮಸ್ಕಾರಾಸನ



ಶ್ರೀ. ಟಿ. ಆರ್. ಎ. ಪೈಗಳು ಈ ಚಿತ್ರದಲ್ಲಿ ಸೂರ್ಯ ನಮಸ್ಕಾರದ ಪ್ರಥಮಾಸನವಾದ ನಮಸ್ಕಾರಾಸನವನ್ನು ಮಾಡುತ್ತಿದ್ದಾರೆ.

ಪ್ರತಿಯೊಬ್ಬನಿಗೂ ವಾರ್ಧಕ್ಯವೆಂದರೇನೆಂಬುದು ಸ್ಪಷ್ಟವಾಗಿ ತಿಳಿದಿದೆ. 'ಮುದುಕ'ನೆಂಬ ಶಬ್ದವನ್ನು ಹೆಚ್ಚಿನವರು ಮೆಚ್ಚುವುದೇ ಇಲ್ಲ. ಜಗತ್ತಿನ ಮಹಾಪುರುಷರು ಮಹತ್ಕಾರ್ಯಗಳನ್ನು ತಮ್ಮ ತಾರುಣ್ಯದಲ್ಲಿಯೇ ಮಾಡಿರುವರೆಂದು ಚರಿತ್ರೆಯೇ ಉದ್ಘೋಷಿಸುತ್ತಿದೆ. ವಸ್ತುಸ್ಥಿತಿಯು ಹೀಗಿರುವಾಗ ಅತ್ಯಂತ ಬೆಲೆಯುಳ್ಳ ತಾರುಣ್ಯದ ಶಕ್ತಿ ಹುರುಪುಗಳನ್ನುಳಿಸಿಕೊಳ್ಳಲು ಯಾರು ತಾನೇ ಆಶಿಸುವುದಿಲ್ಲ.

**ವೃದ್ಧಾಪ್ಯವೆಂದರೇನು?**

ಪ್ರಸಿದ್ಧ ಶರೀರಶಾಸ್ತ್ರಜ್ಞನೊಬ್ಬನು ಹೇಳುವಂತೆ ವಾರ್ಧಕ್ಯವು ಶರೀರದ ಸಾಮಾನ್ಯ ಚಟುವಟಿಕೆಗಳಲ್ಲಿ ಆಗಾಗ ಉಂಟಾಗುವ ಅವ್ಯವಸ್ಥೆಯಾಗಿದೆ". ಕೆಲರಿಗೆ ಪ್ರಾಯವೆಂಬುದರ ಗೊಡವೆಯೇ ಇಲ್ಲ. ಇನ್ನು ಕೆಲವರು ತಮ್ಮ ತಾರುಣ್ಯದಲ್ಲಿ ಕಾಲಿಡುವಾಗಲೇ ಪ್ರಾಯಸ್ಥರ ಲಕ್ಷಣಗಳಿಂದ ತುಂಬಿರುತ್ತಾರೆ. ಶರೀರದಲ್ಲಿ ಆಗಾಗ ಅವ್ಯವಸ್ಥೆಗಳು ಕಂಡುಬರಲಾರಂಭಿಸುತ್ತವೆ. ಕೂದಲು ಬಿಳುಪಾಗುತ್ತದೆ. ಹಲ್ಲುಗಳು ಹೋಗಲಾರಂಭಿಸುತ್ತವೆ. ಹೆಚ್ಚೇಕೆ, ತಾರುಣ್ಯದ ಸನಿಯೇ ಅಂಥವರಿಗಿರುವುದಿಲ್ಲ. ಒಂದು ಜನಾಂಗ ಅಥವಾ ರಾಷ್ಟ್ರದ ತರುಣರು ನಿರ್ವೀರ್ಯ, ನಿಶ್ಶಕ್ತರಾಗಿದ್ದರೆ ಆ ಜನಾಂಗ ಅಥವಾ ರಾಷ್ಟ್ರವು ಏನನ್ನೂ ಮಾಡಲಾರದೆಂದು ಹೇಳುವುದರಲ್ಲಿ ನಿರ್ವಿವಾದ.

**ಸೂರ್ಯ ನಮಸ್ಕಾರದ ಮಹತ್ವ.**

ವೃದ್ಧಾಪ್ಯವನ್ನು ಹೊಡೆದೋಡಿಸುವ ಉಪಯುಕ್ತವಾದೊಂದು ವ್ಯಾಯಾಮವನ್ನು ಪುರಾತನ ಕಾಲದಿಂದಲೇ ಜನರು ಮಾಡುತ್ತಾ ಬಂದಿದ್ದಾರೆ. ದೇಹದ ಬೆಳವಣಿಗೆಗೆ ಸಹಾಯಕಾರಿಯಾಗಿರುವ ಇಂತಹ ವ್ಯಾಯಾಮಗಳನ್ನು

# ಅಂಗಹೀನತೆಯನ್ನು ಹೋಗಲಾಡಿಸಲು ಸೂರ್ಯ ನಮಸ್ಕಾರವೇ ಮದ್ದು

ಮಾಡಿದುದರಿಂದಲೇ ಹಿಂದಿನವರು ಬಹುಕಾಲ ಬಾಳುತ್ತಿದ್ದರೆಂಬುದನ್ನು ನಾವಿಂದು ಕೇಳುತ್ತಿದ್ದೇವೆ. ಸೂರ್ಯ ನಮಸ್ಕಾರವು ಒಂದು ಪುರಾತನ ವ್ಯಾಯಾಮ ಪದ್ಧತಿ. ಇದನ್ನು ಎಡೆಬಿಡದೆ ಮಾಡುವುದರಿಂದ ದೇಹದ ಎಲ್ಲಾ ಭಾಗಗಳಿಗೆ ಅವಶ್ಯವಿರುವ ವ್ಯಾಯಾಮವು ದೊರಕುತ್ತದೆ. ಈ ಆಸನಗಳನ್ನು ಮಾಡುವಾಗ ರಕ್ತಸಂಚಾರವು ಹೆಚ್ಚುವುದಲ್ಲದೆ ದೇಹದ ಎಲ್ಲಾ ಭಾಗಗಳಿಗೆ ಸಾಕಷ್ಟು ರಕ್ತವು ಹರಿಯುತ್ತದೆ. ಸೂರ್ಯ ನಮಸ್ಕಾರಗಳನ್ನು ಮಾಡುವುದರಿಂದ ಯಾವ ಪ್ರಯೋಜನವು ಸಿಗುತ್ತದೆಂಬುದು ಕೆಲವೇ ದಿನಗಳ ಅಭ್ಯಾಸದಿಂದ ಸ್ಪಷ್ಟವಾಗುತ್ತದೆ. ಉಡುಪಿಯ ಕೆನರಾ ಮ್ಯೂಚುವಲ್ ಎಶ್ಯೂರೆನ್ಸ್ ಕಂಪೆನಿಯ ಮೆನೇಜರರಾದ ಶ್ರೀ. ಟಿ. ಆರ್. ಎ. ಪೈಗಳು ಉತ್ತಮ ರೀತಿಯಲ್ಲಿ ಸೂರ್ಯ ನಮಸ್ಕಾರಗಳನ್ನು ಮಾಡಿ ತನ್ನ ಶರೀರ ಪ್ರಕೃತಿಯನ್ನು ಸುಧಾರಿಸಿಕೊಂಡಿರುವುದರಿಂದ ನಮ್ಮ ವಾಚಕರಿಗಾಗಿ ಅವರು ಆಸನಗಳನ್ನು ಮಾಡುವಾಗ ತೆಗೆದ ಭಾವಚಿತ್ರಗಳನ್ನು ಇಲ್ಲಿ ಪ್ರಕಟಿಸಲಾಗಿದೆ. ಆಸನಗಳ ವಿವರಗಳನ್ನು ಚಿತ್ರಗಳ ಕೆಳಗೆ ಕೊಡಲಾಗಿದೆ.

## ೧. ನಮಸ್ಕಾರ ಆಸನ.

ಒಂದು ನಮಸ್ಕಾರದಲ್ಲಿ ಹತ್ತು ಆಸನಗಳಿವೆ. ಅವುಗಳಲ್ಲಿ ಮೊದಲನೆಯದು ನಮಸ್ಕಾರ ಆಸನ. ಈ ಆಸನವನ್ನು ಮಾಡುವಾಗ ನೆಟ್ಟಗೆ ನಿಂತು ಹಿಮ್ಮಡಿಗಳನ್ನು ಜೊತೆಗೊಳಿಸಿ, ಕಾಲಿನ ಹೆಬ್ಬೆರಳುಗಳನ್ನು ದೂರವಿರಿಸಬೇಕು. ಅನಂತರ ಸಾಧ್ಯವಿರುವಷ್ಟು ಶ್ವಾಸವನ್ನು ಒಳಗೆ ತೆಗೆದುಕೊಂಡ ಬಳಿಕ ಭಾರತೀಯ ವಿಧಾನದಂತೆ ನಮಸ್ಕರಿಸಿದಾಗ ಎದೆಯು ವಿಶಾಲವಾಗುತ್ತದೆ.

(ಒಂದನೆ ಚಿತ್ರ ನೋಡಿರಿ.)

## ೨. ಪಾದ ಹಸ್ತಾಸನ

ಒಂದನೆಯ ಆಸನವಾದ ಬಳಿಕ ಮೆಲ್ಲನೆ ಎರಡನೆ ಆಸನವನ್ನು ಮಾಡತೊಡಗಬೇಕು. ಸ್ವಲ್ಪ ನಿಶ್ವಾಸ ಮಾಡಿದ ಬಳಿಕ ಕಾಲುಗಳನ್ನು ಬಗ್ಗಿಸದೆ ಮುಂಭಾಗಕ್ಕೆ ಶರೀರವನ್ನು ಬಗ್ಗಿಸಿ ಎರಡೂ ಕೈಗಳನ್ನು ನೆಲಕ್ಕೆ ತಾಗಿಸಬೇಕು. ಇದರಿಂದ ಬೆನ್ನುಹುರಿಗೆ ವ್ಯಾಯಾಮವು ದೊರಕುತ್ತದೆ.

ಪಾದ ಹಸ್ತಾಸನ



ಈ ಆಸನ ಮಾಡುವಾಗ ಕಾಲುಗಳನ್ನು ಸರ್ವಥಾ ಬಗ್ಗಿಸಬಾರದು.

## ೩. ಏಕಪಾದ ಪ್ರಸಾರಣಾಸನ

ಎರಡನೆಯ ಆಸನವನ್ನು ಮಾಡಿದ ಬಳಿಕ ಎಡಗಾಲನ್ನು ಹಿಂದಿಟ್ಟು ಬಲಮೊಣಗಾಲನ್ನು ಬಗ್ಗಿಸಿ ಇಡೀ ದೇಹದ ಭಾರವು ಬಲತೊಡೆಯ ಮೇಲೆ ಬೀಳುವಂತೆ



ಏಕಪಾದ ಪ್ರಸಾರಣಾಸನ: ಎಡಗಾಲನ್ನು ಹಿಂದಿಟ್ಟು ಬಲ ಮೊಣಗಾಲನ್ನು ಬಗ್ಗಿಸಿ ಇಡೀ ದೇಹದ ಭಾರವು ಬಲತೊಡೆಯ ಮೇಲೆ ಬೀಳಬೇಕು. ಈ ಆಸನ ದಲ್ಲಿ ಶ್ವಾಸವನ್ನು ಬಿಡಬಾರದು.

ಮಾಡಿರಿ. ಎಡಮೊಣಗಾಲು ನೆಲವನ್ನು ಮುಟ್ಟಬಹುದು. ಈ ಆಸನದಲ್ಲಿ ಶ್ವಾಸವನ್ನು ಬಿಡದೆ ನಾಲ್ಕನೆಯ ಆಸನ ವನ್ನು ಮಾಡತೊಡಗಿರಿ.

**೪. ದ್ವಿಪಾದ ಪ್ರಸಾರಣಾಸನ**

ಇನ್ನೊಂದು ಕಾಲನ್ನು ಹಿಂದಕ್ಕೆ ಚಾಚಿ, ಇಡೀ ಶರೀ ರವು ಒಂದೇ ಮಟ್ಟದಲ್ಲಿರಬೇಕಲ್ಲದೆ ಅದು ಕೈ ಮತ್ತು ಕಾಲ್ಬೆರಳುಗಳ ಮೇಲೆ ಆಧರಿಸಿಕೊಂಡಿರಬೇಕು. ಆದರೆ ಶ್ವಾಸವನ್ನು ಬಿಡಬಾರದು. ಈ ಆಸನವನ್ನು ನಾಲ್ಕನೆಯ ಚಿತ್ರದಲ್ಲಿ ಕಾಣಬಹುದು.



ದ್ವಿಪಾದ ಪ್ರಸಾರಣಾಸನ: ಇಡೀ ಶರೀರವು ಒಂದೇ ಮಟ್ಟದಲ್ಲಿದ್ದು ಅದು ಅಂಗೈ ಮತ್ತು ಕಾಲ್ಬೆರಳುಗಳ ಮೇಲೆ ಆಧರಿಸಿಕೊಂಡಿರಬೇಕು.

## ೫. ಅಷ್ಟಾಂಗ ಪ್ರಣೀತಾಸನ

ಆದಾದ ಬಳಿಕ ಎದೆಯನ್ನೂ ಮುಂತಲೆಯನ್ನೂ ನೆಲಕ್ಕೆ ತಾಗಿಸಿರಿ. ಈ ಆಸನದ ಹೆಸರಿನಿಂದಲೇ ತಿಳಿಯುವಂತೆ ಶರೀರದ ಎಂಟು ಭಾಗಗಳು ನೆಲವನ್ನು ಮುಟ್ಟುತ್ತವೆ. ಈ ಆಸನದಲ್ಲಿ ಶ್ವಾಸವನ್ನು ಹೊರಕ್ಕೆ ಬಿಡಬಹುದು. ಆದರೆ ಮೂಗು ಸರ್ವಥಾ ನೆಲಕ್ಕೆ ತಾಗಬಾರದು. ಈ ಆಸನದಲ್ಲಿ ನೆಲಕ್ಕೆ ತಾಗುವ ಭಾಗಗಳೆಂದರೆ ಅಂಗೈಗಳು, ಮೊಣಕಾಲಿನ ಗಂಟುಗಳು, ಎರಡೂ ಕಾಲಿನ ಬೆರಳುಗಳು, ಎದೆ ಮತ್ತು ಮುಂದಲೆ.



**ಅಷ್ಟಾಂಗ ಪ್ರಣೀತಾಸನ**

ಈ ಆಸನದಲ್ಲಿ ದೇಹದ ಎಂಟು ಭಾಗಗಳು ನೆಲಕ್ಕೆ ತಾಗುತ್ತವೆ. ಮೂಗನ್ನು ಸರ್ವಥಾ ನೆಲಕ್ಕೆ ತಾಗಿಸಬಾರದು.

## ೬. ಭುಜಂಗಾಸನ

ತಲೆಯೆತ್ತಿ ಕೈಗಳನ್ನು ನೆಟ್ಟಗೆ ಮಾಡಿರಿ. ಈ ಆಸನದಲ್ಲಿ ಶ್ವಾಸವನ್ನು ಒಳಕ್ಕೆ ತೆಗೆದುಕೊಳ್ಳಬಹುದು.

## ೭. ಭೂಧರ ಆಸನ

ನಿಮ್ಮ ಮುಂಡವನ್ನು ಸಾಧ್ಯವಾದಷ್ಟು ಮೇಲಕ್ಕೆತ್ತಿ ಶಕ್ಯವಿರುವಷ್ಟು ಹಿಂದಕ್ಕೆ ಬಗ್ಗಿಸಿರಿ. ನಿಮ್ಮ ಎರಡೂ ಹಿಮ್ಮಡಿಗಳು ಪೂರ್ಣವಾಗಿ ನೆಲಕ್ಕೆ ತಾಗಿರಬೇಕು. [ಈ ಆಸನದಲ್ಲಿ ಶ್ವಾಸವನ್ನು ಒಳಕ್ಕೆ ತೆಗೆದುಕೊಳ್ಳಬಹುದು.



ಭುಜಂಗಾಸನ

### ೮. ಏಕಪಾದ ಪ್ರಸಾರಣಾಸನ

ಎಡಗಾಲನ್ನು ಮುಂದೆ ತಂದು ಅಂಗೈಯ ಬಳಿಯಲ್ಲಿಟ್ಟು ಮೂರನೆ ಆಸನವನ್ನು ಮಾಡಿರಿ. ಈ ಆಸನದಲ್ಲಿ ಶ್ವಾಸವನ್ನು ಹೊರಕ್ಕೆ ಬಿಡಬಾರದು.

### ೯. ಪಾದ ಹಸ್ತಾಸನ

ಇನ್ನೊಂದು ಕಾಲನ್ನು ಮುಂದಕ್ಕೆ ತಂದು ಎರಡನೆಯ ಆಸನವನ್ನು ಮಾಡಿ ಪೂರ್ಣ ಶ್ವಾಸವನ್ನು ಹೊರಗೆ ಬಿಡಿರಿ.

### ಸೂರ್ಯ ನಮಸ್ಕಾರದ ಪ್ರಯೋಜನಗಳು

ಸೂರ್ಯನಮಸ್ಕಾರಗಳನ್ನು ಪುರುಷರೂ ಸ್ತ್ರೀಯರೂ ಮಾಡಬಹುದಾಗಿದೆ. "ಸೂರ್ಯ ನಮಸ್ಕಾರ"ವೆಂಬ ಹೆಸರನ್ನು ಕಂಡು ಇದು ಧಾರ್ಮಿಕ ವ್ಯಾಯಾಮವೆಂದು ಯಾರೂ ಭಾವಿಸಬೇಕಾಗಿಲ್ಲ. ಎಲ್ಲಾ ಧರ್ಮೀಯರು ತಮ್ಮ ಶರೀರದ ಆರೋಗ್ಯವನ್ನು ಸುಧಾರಿಸುವುದಕ್ಕಾಗಿ ಈ ವ್ಯಾಯಾಮವನ್ನು ಮಾಡಬಹುದು. ೨, ೬ ಮತ್ತು



ಭೂಧರಾಸನ

### ೧೦. ನಮಸ್ಕಾರಾಸನ

ಪ್ರಥಮಾಸನದಂತೆಯೇ ನೆಟ್ಟಗೆ ನಿಂತು ಉಚ್ಛ್ವಾಸ ಬಿಡಿರಿ.

**ತೃತೀಯಾಸನ ಮತ್ತು ಅಷ್ಟಮಾಸನಗಳು, ದ್ವಿತೀಯ ಮತ್ತು ನವಮಾಸನಗಳು ಮತ್ತು ಪ್ರಥಮ ಮತ್ತು ದಶಮಾಸನಗಳು ಒಂದೇ ಆಗಿರುವದರಿಂದ ೮, ೯, ಮತ್ತು ೧೦ನೇ ಆಸನಗಳಿಗೆ ಚಿತ್ರಗಳು ಕೊಡಲ್ಪಡಲಿಲ್ಲ.**

ಮೂರನೆಯ ಆಸನದಲ್ಲಿ ಎಡಗಾಲನ್ನು ಹಿಂದಕ್ಕೆ ತರಬೇಕೆಂದೂ, ಎಂಟನೆಯ ಆಸನದಲ್ಲಿ ಅದೇ ಕಾಲನ್ನು ಮುಂದಕ್ಕೆ ತರಬೇಕೆಂದೂ ಹೇಳಲಾಗಿದೆ. ಆದರೆ ನಮಸ್ಕಾರಗಳನ್ನು ಮಾಡುವಾಗ ಒಮ್ಮೆ ಎಡ ಮತ್ತೊಮ್ಮೆ ಬಲಗಾಲನ್ನು ಮುಂದಕ್ಕೆ ತರಬೇಕು.

೯ನೆ ಆಸನಗಳಿಂದ ಬೆನ್ನುಹುರಿಯು ಹಿಂದಕ್ಕೂ ಮುಂದಕ್ಕೂ ಹೋಗುವುದರಿಂದ ಅದು ಶಿಥಿಲವಾಗುತ್ತದೆ ಅಷ್ಟಾಂಗ ಪ್ರಣೀತಾಸನದಿಂದ ಉದರದ ಸ್ನಾಯುಗಂಡಗಳಿಗೆ ವ್ಯಾಯಾಮವು ಸಿಗುವುದಲ್ಲದೆ ಪಚನೇಂದ್ರಿಯಗಳನ್ನು ಸರಿಯಾಗಿರಿಸುವಂತೆ ಮಾಡುತ್ತದೆ. ಋತುದೋಷಗಳಿರುವ ಸ್ತ್ರೀಯರಿಗೆ ಈ ನಮಸ್ಕಾರಗಳಿಂದ ತುಂಬಾ ಪ್ರಯೋಜನವಿದೆಯೆಂಬುದು ಅದೆಷ್ಟೋ ಮಂದಿಯ ಅನುಭವದ ಮಾತಾಗಿದೆ. ಅಂಗಹೀನತೆ, ಮಲಬದ್ಧತೆ, ಮೊದಲಾದ ತೊಂದರೆಗಳಿರುವವರಿಗೆ ಸೂರ್ಯನಮಸ್ಕಾರವು ಬಹಳ ಪ್ರಯೋಜನಕಾರಿಯಾಗಿದೆ. ಚುಟುಕಾಗಿ ಹೇಳುವುದಿದ್ದರೆ ಸೂರ್ಯ ನಮಸ್ಕಾರಗಳು ತಾರುಣ್ಯವನ್ನು ರಕ್ಷಿಸುವ ಮಹತ್ವದ ಒಂದು ಉಪಾಯವಾಗಿದೆ.

—o—




ಪ್ರಶ್ನೆಗಳನ್ನು ಕೇಳುವವರು ತಮ್ಮ ಸಂಪೂರ್ಣ ವಿಳಾಸವನ್ನು ಕೊಡಬೇಕು. ಪೂರ್ಣ ವಿಳಾಸಗಳನ್ನು ಕೊಡದವರ ಪ್ರಶ್ನೆಗಳು ಉತ್ತರಿಸಲ್ಪಡಲಾರವು. ಪ್ರಶ್ನೆಗಳು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಡಬೇಕು. ಅಯೋಗ್ಯವೆಂದು ಕಂಡುಬಂದ ಪ್ರಶ್ನೆಗಳಿಗೆ ಉತ್ತರಕೊಡಲಾಗುವುದಿಲ್ಲ. ತಮ್ಮ ಪ್ರಶ್ನೆಗಳು ಹಿಂದೆಕಳುಹಿಸಲ್ಪಡಬೇಕೆಂದು ಬಯಸುವವರು ಅದಕ್ಕಾಗುವ ಅಂಚೆಚೀಟನ್ನು ಕಳುಹಿಸಿಕೊಡಬೇಕು.

**ಶ್ರೀ. ಟಿ. ರಘುನಾಥ ಪೈ, ಉಡುಪಿ.**

"ಮಿ|| ಜಿನ್ನರು ಮತ್ತು ಅವರ ಕೆಲವೇ ಮಂದಿ ಅನುಯಾಯಿಗಳುಳ್ಳ ಮುಸ್ಲಿಂ ಲೀಗು ಒಂಭತ್ತು ಕೋಟಿ ಮಹಮ್ಮದೀಯರ ಪ್ರತಿನಿಧಿಗಳಾದರೆ ಬ್ಯಾ|| ಸಾವರ್ ಕಾರ್ ಮತ್ತು ಅವರ ಅನುಯಾಯಿಗಳುಳ್ಳ ಹಿಂದೂ ಮಹಾಸಭೆಯು 23 ಕೋಟಿ ಹಿಂದೂಗಳ ಪ್ರತಿನಿಧಿ ಸಂಸ್ಥೆಯೆಂದು ಒಪ್ಪಬೇಕಾಗುವುದಲ್ಲವೇ? ಹಿಂದೀ ಜನಾಂಗದ ಏಕ ಮಾತ್ರ ಪ್ರತಿನಿಧಿಸಂಸ್ಥೆಯಾಗಿರುವ ಅಖಿಲ ಭಾರತ ರಾಷ್ಟ್ರೀಯ ಸಭೆಯು ಮುಸ್ಲಿಂ ಲೀಗಿನೊಡನೆ ತಾನಾಗಿಯೇ ಸಂಧಾನ ಮಾಡುವುದಕ್ಕಿಂತಲೂ, ಹಿಂದು ಮಹಾ ಸಭೆ ಮತ್ತು ಮುಸ್ಲಿಂ ಲೀಗುಗಳು ಒಂದು ಒಪ್ಪಂದವನ್ನು ಮಾಡಿಕೊಳ್ಳುವಂತೆ ಹೇಳಿ ಆ ಒಪ್ಪಂದಕ್ಕೆ ತನ್ನ ಸಮ್ಮತಿಯನ್ನೀಯುವುದು ಉಚಿತವಲ್ಲವೇ? ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?"

ಹಿಂದೂ ಮಹಾಸಭೆ ಮತ್ತು ಮುಸ್ಲಿಮ್ ಲೀಗುಗಳೊಳಗೆ ಸಂಧಾನ ಮಾಡಿಸುವ ನಿಮ್ಮ ಸೂಚನೆಯು ಬಹಳ ಸೊಗಸಾಗಿದೆ. ದುರದೃಷ್ಟವಶಾತ್ ಭಾರತದ ಒಂಭತ್ತು ಕೋಟಿ ಮುಸಲ್ಮಾನರೆಲ್ಲರೂ ಮುಸ್ಲಿಮ್ ಲೀಗನ್ನು ತಮ್ಮ ಪ್ರತಿನಿಧಿ ಸಂಸ್ಥೆಯೆಂದು ಒಪ್ಪಿಕೊಳ್ಳುವುದಿಲ್ಲ. ಅದೇ ರೀತಿಯಲ್ಲಿ ೨೩ ಕೋಟಿ ಹಿಂದುಗಳೂ ಹಿಂದು ಮಹಾಸಭೆಯನ್ನು ತಮ್ಮ ಪ್ರತಿನಿಧಿ ಸಂಸ್ಥೆಯೆಂದು ಒಪ್ಪಿಕೊಳ್ಳುವುದಿಲ್ಲ. ಹೇಗಿದ್ದರೂ ನಿಮ್ಮ ಸೂಚನೆಯನ್ನು ಶ್ರೀಗಳಾದ ಜಿನ್ನಾ, ಸಾವರ್ಕರರು ಕೇಳಿದರೆ ಏನು ಮಾಡಿಯಾರೆಂದು ಹೇಳಲಾಗುವುದಿಲ್ಲ. ಆದರೆ ಇವೆರಡು ಸಂಸ್ಥೆಗಳು ಒಂದಾಗುವುದರ ಕುರಿತು ಯೋಚಿಸುವಾಗ ಉತ್ತರ ಧ್ರುವವೂ ದಕ್ಷಿಣ ಧ್ರುವವೂ ಅದೇಕೆ ಒಂದಾಗಬಾರದೆಂದು ನನಗನಿಸುತ್ತದೆ. ಕಾರಣ-ಈ ಸಂಸ್ಥೆಗಳು ಅರಿಸಿಕೊಂಡಿರುವ ಧೋರಣೆಗಳು ತೀರಾ ವಿಚಿತ್ರವಾಗಿವೆ. ವಿಶೇಷವಾಗಿ ಇತ್ತೀಚೆಗೆ ಮಿ|| ಜಿನ್ನರು ತಮ್ಮ ಪಕ್ಷವನ್ನು ಜೆಕೊಸ್ಲೊವೇಕಿಯದ ಸುಡೇಟೆನ್ ಜರ್ಮನರಿಗೆ ಹೋಲಿಸಿಕೊಂಡಿರುವುದೂ, ಅಲ್ಪ ಸಂಖ್ಯಾತರೆಂಬ ಶುಷ್ಕ ಪ್ರಶ್ನೆಗೆ ವಿಶೇಷ ಪ್ರಾಮುಖ್ಯತೆಯನ್ನು ಕೊಟ್ಟಿರುವುದೂ, ಇಸ್ಲಾಮ್ ಅಪಾಯದಲ್ಲಿದೆಯೆಂದು ಹೇಳಿ ಮುಸಲ್ಮಾನರನ್ನು ಸುಮ್ಮಗೆ ದಿಗಿಲುಗೊಳಿಸುವುದೂ ನಮ್ಮ ನಾಡಿನ ಪ್ರಗತಿಗೆ ತುಂಬಾ ಹಾನಿಕಾರಿಯಾಗಿದೆ. ಅದೇ ರೀತಿಯಲ್ಲಿ ಹಿಂದೂ ಮಹಾ ಸಭೆಯೂ ತನ್ನ ವಿಚಿತ್ರ ಧೋರಣೆಯನ್ನು ಅನುಸರಿಸಿಕೊಂಡು ಬರುತ್ತಿದೆ. ಒಂದು ವೇಳೆ ನಿಮ್ಮ ಸೂಚನೆಯಂತೆ ಎಣ್ಣೆ-ನೀರುಗಳಂತಿರುವ ಇವೆರಡು ಸಂಸ್ಥೆಗಳು ಒಂದಾದರೆ, ಅವರೊಳಗಿನ ಒಪ್ಪಂದವು ಯೋಗ್ಯವಾಗಿದ್ದರೆ ಕಾಂಗ್ರೆಸು ಖಂಡಿತವಾಗಿಯೂ ತನ್ನ ಸಮ್ಮತಿಯನ್ನು ಕೊಡದಿರಲಾರದು. ಆದರೆ ಈ ಒಪ್ಪಂದವು ಎಂದಾಗಬಹುದೆಂದು ಯಾರಿಗೆ ಗೊತ್ತು? ಒಟ್ಟಿನ ಮೇಲೆ ನಿಮ್ಮ ಸೂಚನೆಯಂತೆ ಇವೆರಡು ಸಂಸ್ಥೆಗಳು ಸಂಧಾನ ಮಾಡಿಕೊಂಡರೆ ನಿಮಗೆ ಸಮಗ್ರ ಭಾರತವು ತುಂಬಾ ಋಣಿಯಾಗಬಹುದು.

೦೦೦ ೦೦೦

**ಶ್ರೀ. ಎ. ಎಸ್. ವೆಂಕಟೇಶಯ್ಯ, ಹಾಸನ**

"ನಾನು ಪ್ರತಿನಿತ್ಯವೂ ಪತ್ರಿಕೆಗಳನ್ನು

ಮತ್ತು ವಾರ್ತಾಪತ್ರಿಕೆಗಳನ್ನು ಓದುವ ಪದ್ಧತಿ. ಪ್ರತಿಕೆಗಳನ್ನು ಓದುತ್ತಿರುವಾಗ ಮಾತ್ರ ನಾನು ಕಥೆಗಳನ್ನು ಬರೆಯಬೇಕೆಂದು ಮನಸ್ಸಿನಲ್ಲಿ ಯೋಚನೆ ಮಾಡುತ್ತಾ ಓದುತ್ತೇನೆ. ಓದಿ ಮುಗಿಸಿದ ನಂತರ ಏನು ಬರೆಯಲೂ ತಿಳಿಯದಂತಾಗುವುದು. ಕಾರಣವೇನು?''

ಕತೆಗಳನ್ನು ಓದುವವರೆಲ್ಲಾ ಬರೆಯತೊಡಗಿದರೆ ಕರ್ನಾಟಕದಲ್ಲಿ ಬಿಡಿಸಲಾಗದ ಒಂದು ಸಮಸ್ಯೆಯು ತಲೆದೋರಬಹುದು. ಕಾಗದ ಮಸಿಗಳಿಗೆ ಬರಗಾಲಬರಬಹುದು. ಪತ್ರಿಕೆಗಳ ಪುಟಗಳು ಕತೆಗಳಿಂದಲೇ ತುಂಬಿ ಹೋಗಬಹುದು, ಸಂಪಾದಕರ ಕಸಬುಟ್ಟಿಯು ಅಸ್ವೀಕೃತ ಕತೆಗಳ ಭಾರದಿಂದ ಬಳಲಿ ಬೆಂಡಾಗಬಹುದು. ಹೆಚ್ಚೇಕೆ ಕತೆಗಳನ್ನು ಓದುವವರೇ ಇಲ್ಲದಂತಾಗಬಹುದು! ಇಂತಹ ಜಟಿಲ ಸಮಸ್ಯೆಯನ್ನು ಉಂಟುಮಾಡುವ ಯೋಚನೆಯು ನಿಮಗೇಕೆ ಹೊಳೆಯಿತು? ಕರ್ನಾಟಕ ಏಕೀಕರಣವಾಗಲಿಕ್ಕೆ ನೂರಾರು ತೊಂದರೆಗಳು ಒಂದರ ಬಳಿಕೊಂದೆಂಬಂತೆ ಕಾಣಿಸಿಕೊಳ್ಳುತ್ತಿರುವಾಗ ಇದೊಂದು ಸಮಸ್ಯೆಯ ಬೀಜವನ್ನು ಬಿತ್ತಿ ಕನ್ನಡ ಜನನಿಯನ್ನು ಮರುಕಕ್ಕೀಡು ಮಾಡಬೇಡಿ. ಭಾವಿಸುವುದನ್ನೆಲ್ಲಾ ಕಾರ್ಯರೂಪದಲ್ಲಿ ಮಾಡಲಾಗುವುದಿಲ್ಲ. ಹಾಗೆ ಸಾಧ್ಯವಾಗುತ್ತಿದ್ದರೆ ಎಲ್ಲರೂ ಕಮಾಲ್ ಪಾಶರಂತೆ ಸರ್ವಾಧಿಕಾರಿಗಳಾಗುತ್ತಿದ್ದರು. ಪಂಡಿತ ನೆಹರುಗಳಂತೆ ಧುರೀಣರಾಗುತ್ತಿದ್ದರು. ಗಾಂಧಿಯವರಂತೆ ಮಹಾತ್ಮರಾಗುತ್ತಿದ್ದರು. ರವೀಂದ್ರರಂತೆ ಕವೀಂದ್ರರಾಗುತ್ತಿದ್ದರು. ಅದು ಕಾರಣ ಓದಿದೊಡನೆಯೇ ಬರೆಯಬಹುದೆಂಬ ಭ್ರಾಮಕತೆಯನ್ನು ಬಿಟ್ಟು, ತುಂಬಾ ಓದಿ, ಆ ಬಳಿಕ ಅಭ್ಯಾಸಕ್ಕಾಗಿ ಕೆಲವು ಕತೆಗಳನ್ನು ಬರೆದು, ಕೊನೆಗೆ ಯೋಗ್ಯವಾದುವುಗಳನ್ನು ಪತ್ರಿಕೆಗಳಿಗೆ ಕಳುಹಿಸುವ ಯೋಚನೆ ಮಾಡಿರಿ. 'ಓದಿ ಮುಗಿಸಿದ ನಂತರ ಬರೆಯಲು ತಿಳಿಯದಂತಾಗುವು'ದಕ್ಕೆ ಹಲವು ಕಾರಣಗಳಿರಬಹುದು. ಪ್ರಾಯಶಃ ನೀವು ಓದಿದಂತೆಯೇ ಮರೆತು ಬಿಡುವ ಅಪೂರ್ವ ಕಲೆಯ ಅಭ್ಯಾಸವು ಈ ಕಾರಣಗಳಲ್ಲೊಂದಾಗಿರಬಹುದು.

ooo ooo

**ಶ್ರೀ. ಶ್ರೀನಿವಾಸರಾವ್. ಭುವನೇಶ್ವರಿ ಭವನ, ಮಂಡಿ ಮೊಹಲ್ಲಾ, ಮೈಸೂರು.**

"ನಾನೊಬ್ಬ ಅವಿವಾಹಿತ ತರುಣ; ನಾನು ಸುಮಾರು ಮೆಟ್ರಿಕ್ಲೇಷನ್ ವರೆಗೆ ಓದಿದ್ದೇನೆ. ನನಗೆ ತಿಂಗಳಿಗೆ ಸುಮಾರು 100 – 0 – 0 ರೂಪಾಯಿಗಳ ವರೆಗೆ ಉತ್ಪತ್ತಿ ಇದೆ. ನಾನು ಅಂತಹ ಸುಂದರನಲ್ಲದಿದ್ದರೂ, ಕುರೂಪಿಯೇನೂ ಅಲ್ಲ. ನನಗೆ ಈಗ ಸುಮಾರು 20 ವರುಷ ಇರಬಹುದು. ನಾನು ಉಚ್ಚ ಉಡುಪಿ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದವ. ಆಸ್ತಿ ವಿಚಾರ ಕೇಳಿದರೆ ನಾನು ಯಾರಿಗೋಸ್ಕರ ನಿಮ್ಮ ಸಲಹೆಯನ್ನು ಕೇಳುತ್ತಲಿರುವೆನೋ ಅವರಿಗಿಂತ ಸ್ವಲ್ಪ ಜಾಸ್ತಿಯೇ ಉಂಟು. ನನಗೆ ಈಗಿನ ಕಾಲದ ನಡತೆಯುಳ್ಳ (up-to-date) ಒಬ್ಬ ಹುಡುಗಿಯು ಬೇಕು. ಇದುವರೆಗೆ ಸುಂದರಿಯರಾದ ಹುಡುಗಿಯರಾರೂ ನನಗೆ ಸಿಕ್ಕಲಿಲ್ಲ. ಮೊನ್ನೆ ಮೈಸೂರಿನಲ್ಲಿ ಸುಪ್ರಸಿದ್ಧ ಸಿನಿಮಾ ನಟಿಯಾದ ಆಪ್ಟೆಯನ್ನು ನೋಡಿ ನನಗೆ ಸುಂದರ ಹುಡುಗಿ ಎನಿಸಿತು. ಅವಳ ಸೌಂದರ್ಯವೂ ನನ್ನನ್ನು ಮುಗ್ಧನನ್ನಾಗಿ ಮಾಡಿಬಿಟ್ಟಿದೆ. ಆದ್ದರಿಂದ ಅವಳನ್ನು ಮದುವೆಯಾಗಬೇಕೆಂದಿದ್ದೇನೆ. ನಾನು ಯಾವ ರೀತಿಯಲ್ಲಿ ಅವಳನ್ನು ಮದುವೆಯಾಗುವುದು? ಮದುವೆ ಯಾಗುವುದಕ್ಕೆ ಒಪ್ಪುತ್ತಾಳೆಯೇ? ದಯವಿಟ್ಟು ಯಾವುದಕ್ಕೂ ನಿಮ್ಮ ಸಲಹೆಯನ್ನು ಕೊಡುವಿರಾ?''

ಕುಮಾರಿ ಶಾಂತಾ ಆಪ್ಟೆಯನ್ನು ನೀವು ಮದುವೆಯಾಗಲು ಆಶಿಸಿ ಆ ಕುರಿತು ನನ್ನ ಸಲಹೆಯನ್ನು ಕೇಳಿರುವುದನ್ನು ನೋಡುವಾಗ ನೀವು ತುಂಬಾ ಎದೆಗಾರಿಕೆಯುಳ್ಳವರೆಂದು ಕಾಣುತ್ತದೆ. ಪ್ರಾಯಶಃ ಈ ಪ್ರಶ್ನೆಯನ್ನು ಬರೆದು ಕಳುಹಿಸುವ ಮೊದಲು "ಫಿಲ್ಮ್ ಇಂಡಿಯಾ" ಕಚೇರಿಯಲ್ಲಿ ನಡೆದ ಘಟನೆಯ ಕುರಿತು ನೀವು ಅನೇಕ ಬಾರಿ ಯೋಚಿಸಿರಬಹುದು. ಯೋಚಿಸಿ ಕೆಲವೊಮ್ಮೆ ದಿಗಿಲುಗೊಂಡಿರಬಹುದು. ಇಷ್ಟು ಧೈರ್ಯವನ್ನು ತಂದುಕೊಂಡು ನೀವೀ ಪ್ರಶ್ನೆಯನ್ನು ಕೇಳಿರುವಾಗ ನಿಮ್ಮನ್ನು ನಿರಾಶೆಗೀಡುಮಾಡಲು ನನಗಿಚ್ಛೆಯಿಲ್ಲ. ನೀವು ಸುರೂಪಿ, ಧನಿಕ ಎಂದು ಮೊದಲಾಗಿ ಹೇಳಿರುವಿರಿ. ಸರಿ. ಈ ಭಾಗವು ಸಾಮಾನ್ಯಮಟ್ಟಿಗೆ ಯೋಗ್ಯವಾಗಿದೆಯೆನ್ನಿ. ಆದರೆ ನಿಮಗೆ ಯಾವ ಕಲೆಯಲ್ಲಿ ಅಭಿರುಚಿಯಿದೆ? ಕುಮಾರಿ ಆಪ್ಟೆಗೆ ಸಂಗೀತವೆಂದರೆ ಪ್ರಾಣ. ಆಕೆ ಈಗಲೂ ಸಂಗೀತಾಭ್ಯಾಸಕ್ಕಾಗಿ ತನ್ನ ವೇತನದ ಹೆಚ್ಚಿನಂಶವನ್ನು ವ್ಯಯಿಸುತ್ತಿದ್ದಾಳೆ. ಈಗಲೂ ನೃತ್ಯಾಭಿನಯಗಳನ್ನು ಕಲಿಯುತ್ತಿದ್ದಾಳೆ. ಭಾರತದ ನಟನಾಧಿದೇವತೆಯೆನಿಸಿದ ಶಾಂತಾ ನಿಮ್ಮ ಧನವನ್ನು ನೋಡಿ ಮೆಚ್ಚಲಾರಳು. ಮಾತ್ರವಲ್ಲ, ಹಾಗೆ ಮಾಡುವುದೂ ಸರಿಯಲ್ಲ. ಭಾರತೀಯ ನೃತ್ಯಕಲೆ ಮತ್ತು ಸಂಗೀತದ ಗರ್ಭಾಂಗಣವನ್ನು ಪ್ರವೇಶಿಸುವುದರಲ್ಲಿ ಸಹಾಯ ಮಾಡುವ ಕಲಾಪ್ರೇಮಿಯಾದೊಬ್ಬ ತರುಣನನ್ನು ಆಕೆಯು ವರಿಸ

(೪೨ನೆ ಪುಟ ನೋಡಿರಿ.)

# ಹಿಟ್ಲರನ ಜನಾಂಗ ಸಭೆಯ



# ನಿರ್ಮಾಣ

## ರಾಷ್ಟ್ರಸಂಘದ ಕಾರ್ಯಾಲಯದಲ್ಲಿ ಅಧಿಕಾರಿಗಳ ರಾಜಿನಾಮೆ!

—೦೦೦—

## ಬರ್ನಾರ್ಡ್ ಷಾರವರ "ಜಿನೇವಾ" ನಾಟಕ

ಜಾರ್ಜ್ ಬರ್ನಾರ್ಡ್ ಷಾ



ಪ್ರೌಢ ಆಂಗ್ಲ ನಾಟಕ ಕರ್ತರಾದ ಬರ್ನಾರ್ಡ್ ಷಾರವರು ಸರ್ವಾಧಿಕಾರಿಗಳನ್ನೂ, ಈಗಿನ ಬ್ರಿಟಿಷ ಪ್ರಜಾಸತ್ತೆಯನ್ನೂ ಅಣಕಿಸುವ "ಜಿನೇವಾ" ಎಂಬ ನಾಟಕವನ್ನು ಬರೆದು ತಮ್ಮ ತುಂಟ ಮನೋವೃತ್ತಿಯಿಂದ ಜಗತ್ತನ್ನು ಮೆಚ್ಚಿಸಿದ್ದಾರೆ.

### ಬರ್ನಾರ್ಡ್‌ಷಾರ ವಿಡಂಬನೆ.

ಪ್ರಸಿದ್ಧ ಇಂಗ್ಲಿಷ್ ನಾಟಕ ಕರ್ತರಾದ ಜೋರ್ಜ್ ಬರ್ನಾರ್ಡ್ ಷಾರವರು ಇತ್ತೀಚೆಗೆ "ಜಿನೇವಾ" ಎಂಬೊಂದು ಹೊಸ ನಾಟಕವನ್ನು ಬರೆದು ಪ್ರಚಂಡ ವಿಮರ್ಶೆಗೊಳಗಾಗಿದ್ದಾರೆ. ಅವರ ಭಾವನಾಮಯ ಚರಿತ್ರೆಯ ಕುರಿತು ಗಿಲ್ಬರ್ಟ್ ಮರೇಯವರು ವಿಮರ್ಶಿಸುತ್ತಾ ಅವರು 'ದಯದಾಕ್ಷಿಣ್ಯವಿಲ್ಲದ ನಾಟಕವನ್ನು ರಚಿಸಿದ್ದಾರೆ' ಎಂದು ಹೇಳಿದ್ದಾರೆ. ಬರ್ನಾರ್ಡ್‌ಷಾರವರ ವಿಡಂಬನಾತ್ಮಕ ಬರಹವು ಎಲ್ಲಾ ದೃಷ್ಟಿಗಳಿಂದಲೂ ಸ್ವಾರಸ್ಯಮಯವಾಗಿದೆ.

### ನಿರ್ದಾಕ್ಷಿಣ್ಯತೆ.

ನಿರ್ದಾಕ್ಷಿಣ್ಯವಾದ ಕಟು ವಿಮರ್ಶೆಯನ್ನು ಮಾಡುವುದು ಷಾರವರ ಒಂದು ವೈಶಿಷ್ಟ್ಯ. ಅವರ ನವೀನ ನಾಟಕದಲ್ಲಿ ಪ್ರತಿಯೊಬ್ಬ ರಾಜನೀತಿಜ್ಞನೂ ತನ್ನ ಶುಷ್ಕತೆಯನ್ನು ವ್ಯಕ್ತಪಡಿಸುತ್ತಾನೆ. ಅವರ ಸರ್ವಾಧಿಕಾರಿಗಳು ನೋಡುವವರಿಗೆ ವಿದೂಷಕರಂತೆ ಕಾಣಿಸುತ್ತಾರೆ. ಅದರಲ್ಲಿರುವ ಬ್ರಿಟಿಷ್ ಪ್ರಜಾಪ್ರಭುತ್ವವು ಭಯಂಕರವೂ ಹಾಸ್ಯಾಸ್ಪದವೂ ಆಗಿದೆ. ನಾಟಕದ ಸಂಭಾಷಣೆಯು ಚುಚ್ಚುಹಾಸ್ಯದಿಂದ ತುಂಬಿಕೊಂಡು ಎಂಥವರನ್ನೂ ಮೆಚ್ಚಿಸುವಂತಿದೆ.

### ನ್ಯಾಯವಾಗಿರಬೇಕೇಕೆ?

ಅದರಲ್ಲಿಯ ಚತುರ ಹುಚ್ಚಾಟವು ಉಕ್ಕೇರಿ ಬರುತ್ತದೆ. ರಾಜನೀತಿಯ ಗರ್ಭಾಂಗಣದಲ್ಲಿ ನಲಿಯುತ್ತಿರುವವರನ್ನು ಷಾರವರು ಚತುರ ತಲೆಹೋಕರೆಂದು ವರ್ಣಿಸಿದ್ದಾರೆ. ಅವರ ನಾಟಕವು ನ್ಯಾಯಸಮ್ಮತವಾಗಿರಬೇಕೆಂದು ಹೇಳಬೇಕಾಗಿಲ್ಲ. ಕಾರಣ— "ನ್ಯಾಯಮಾಡಲಿಕ್ಕೆ ನಾನಾರು?" ಎಂದು ಅವರು ಮೊದಲೇ ಹೇಳಿಬಿಟ್ಟಿದ್ದಾರೆ. ನ್ಯಾಯ ದಾಕ್ಷಿಣ್ಯಗಳನ್ನು ಅವರ ಕೃತಿಯಲ್ಲಿ ನಿರೀಕ್ಷಿಸಿದರೆ ನಿರಾಶೆಯಲ್ಲದೆ ಬೇರಾವ ಗತಿಯೂ ಇಲ್ಲ.

### ನಾಟಕದ ಪಾತ್ರಗಳು.

ಬರ್ನಾರ್ಡ್‌ಷಾರವರ "ಜಿನೇವಾ" ಎಂಬೀ ನಾಟಕದಲ್ಲಿ ಜನರು ಯಾರನ್ನು ಭಯಂಕರ ವ್ಯಕ್ತಿಗಳೆಂದೆಣಿಸುತ್ತಾರೋ ಅವರನ್ನು ಷಾರವರು ಸಾಮಾನ್ಯ ವ್ಯಕ್ತಿಗಳಂತೆ ಚಿತ್ರಿಸಿದ್ದಾರೆ. ಜನಜೀವನದಲ್ಲಿರುವ ದೋಷಗಳನ್ನು ಎತ್ತಿ ತೋರಿಸುವ

ಕೆಲಸವು ಈ ನಾಟಕದಲ್ಲಿ ಯಶಸ್ವಿಯಾಗಿ ಮಾಡಲ್ಪಟ್ಟಿದೆ. ಷಾರವರ ಫ್ಲೇಂಕೋ (ಸ್ಪೈನಿನ ಜನರಲ್ ಫ್ರೇಂಕೊ) ನಾಟಕದಲ್ಲಿ ಯೋಗ್ಯ ವ್ಯಕ್ತಿಯಾಗಿದ್ದಾನೆ. ಆವರೆ ಅವನು ಬೇಟ್ಲರ್ (ಅಂದರೆ ಯುದ್ಧ ಮಾಡುವವ — ಹಿಟ್ಲರ್ ಎಂಬುದರ ಬದಲು ಆರಿಸಿಕೊಂಡ ಹೆಸರಿದು) ಮತ್ತು ಬೊಂಬಾರ್ಡನ್(ಮುಸ್ಸೋಲಿನಿ)ರವರ ಕೈಗೊಂಬೆಯಾಗಿರುತ್ತಾನೆ.

**ಬ್ರಿಟಿಷರ ಖಂಡನೆ.**

ಈ ನಾಟಕದಲ್ಲಿ ಎಲ್ಲರಿಗಿಂತಲೂ ಬ್ರಿಟಿಷ್ ವಿದೇಶಾಂಗ ಮಂತ್ರಿ ಸರ್ ಓರ್ಫಿಯಸ್ ಮಿಡ್‌ಲೇಂಡರ್ (ಪಾತ್ರದ ಹೆಸರು) ಎಂಬವರು ಪುರಾತನ ಕಾಲದ ಒಬ್ಬ ವ್ಯಕ್ತಿಯಂತೆ ಮಾತನಾಡುತ್ತಾರೆ. ಅವರ ಧೋರಣೆ ಮತ್ತು ಸಂಭಾಷಣೆಗಳು ತೀರಾ ವಿಚಿತ್ರವಾಗಿವೆ. ಅಂತರ್‌ರಾಷ್ಟ್ರೀಯ ನ್ಯಾಯಸ್ಥಾನದ ನ್ಯಾಯಾಧಿಪತಿಗಳು ಎಲ್ಲಾ ಪಾತ್ರಗಳಿಗಿಂತಲೂ ಪ್ರಾಮುಖ್ಯ ಭಾಗವನ್ನು ವಹಿಸುತ್ತಾರೆ. ಜನಾಂಗ ಸಭೆಯು ಸಮಾಧಿಸ್ಥಿತಿಯಲ್ಲಿದ್ದು ಅದನ್ನು ಹಿಟ್ಲರನು ಸರಿಪಡಿಸುವಂತಿದ್ದರೂ ಷಾರವರು ಅಂತರ್‌ರಾಷ್ಟ್ರೀಯ ಐಕ್ಯಕ್ಕೆ ತನ್ನ ಪೂರ್ಣ ಬೆಂಬಲವಿತ್ತು ಆ ತತ್ವಕ್ಕೆ ಮನ್ನಣೆಯಿತ್ತಿದ್ದಾರೆ.

**ಬೌದ್ಧಿಕ ಸಹಕಾರ.**

ಮಿಸ್ ಬೆಗೋನಿಯಾ ಬ್ರೌನ್ ಎಂಬಾಕೆ ಬೌದ್ಧಿಕ ಸಹಕಾರ ಸಮಿತಿಯ ಕಾರ್ಯದರ್ಶಿಯಾಗಿ ಈಗಿನ ಬ್ರಿಟಿಷ್ ಪ್ರಜಾಸತ್ತೆಯನ್ನು ಚಿತ್ರಿಸುತ್ತಾಳೆ. ಆಕೆಗೆ ವಿದ್ಯಾವೇತನವೊಂದು ಸಿಕ್ಕಿದರೂ ಬುದ್ಧಿಶಕ್ತಿಯು ಸೊನ್ನೆ. ತಾನೇ ಅತೀ ದೊಡ್ಡವಳೆಂದು ಭಾವಿಸಿಕೊಳ್ಳುವುದು ಆಕೆಯ ಸ್ವಭಾವ. ವೃತ್ತಪತ್ರಿಕೆಗಳ ಪ್ರಶಂಸೆಯನ್ನು ಪಡೆಯುವುದೇ ಆಕೆಯ ವೈಶಿಷ್ಟ್ಯ. ಆಕೆಯು ಇಂದಿನ ಚೇಂಬರ್ಲೇನ್ ಸರಕಾರದ ಎಲ್ಲಾ ವಿಚಿತ್ರ ಗುಣಗಳ ಮೂರ್ತಿಮಂತ ಸ್ವರೂಪಳಾಗಿದ್ದಾಳೆ. ರಾಜನೀತಿಯೆಂದರೇನೆಂದು ಅವಳಿಗರಿಯದು.



ಹೆರ್ ಹಿಟ್ಲರ್.

ಸಾಮ್ರಾಜ್ಯಶಾಹೀ ಮನೋವೃತ್ತಿಯುಳ್ಳ ಆ ಕಾರ್ಯದರ್ಶಿಣಿಯು ಕೊನೆಗೆ ಪಾರ್ಲಿಮೆಂಟಿನ ಒಬ್ಬ ಸದಸ್ಯೆಯಾಗಿ ಬ್ರಿಟಿಷ್ ಸಾಮ್ರಾಜ್ಯದ ಪ್ರಸಿದ್ಧ ಸ್ತ್ರೀಯೆನಿಸುತ್ತಾಳೆ.

**ಜನಾಂಗ ಸಭೆ.**

ಬರ್ನಾರ್ಡ್ ಷಾರವರು ನಾಟಕದಲ್ಲಿ ಹೇಳುವಷ್ಟು ಬೌದ್ಧಿಕ ಸಹಕಾರವು ಕಾರ್ಯರೂಪಕ್ಕೆ ಬರಲಿಲ್ಲವೆಂದು ಗಿಲ್ಬರ್ಟ್ ಮರೆಯವರು ಅಭಿಪ್ರಾಯ ಪಟ್ಟಿದ್ದಾರೆ. ಮಹಾಯುದ್ಧದ ಬಳಿಕ ಜನಾಂಗಸಭೆಯನ್ನು ಸ್ಥಾಪಿಸಿ ಲೋಕಶಾಂತಿಯನ್ನು ಪಡೆಯಬೇಕೆಂದು ಎಲ್ಲರು ಆಶಿಸಿದರೂ, ಅದರ ಸ್ಥಾಪಕರು ಬೌದ್ಧಿಕ ಸಹಕಾರದ ಪ್ರಶ್ನೆಯನ್ನೇ ಮರೆತು, ಜನಾಂಗಸಭೆಯನ್ನು ಕಡೆಗಣಿಸಿ, ತಮಗೆ ಮನಬಂದಂತೆ ವರ್ತಿಸತೊಡಗಿದರು. ಬ್ರಿಟಿಷ್ ಮತ್ತು ಇನ್ನಿತರ ಸರಕಾರಗಳು ಬೌದ್ಧಿಕ ಸಹಕಾರಕ್ಕೆ ಮನ್ನಣೆ ಕೊಟ್ಟಿದ್ದರೆ ಯುರೋಪಿನ ಚರಿತ್ರೆಯು ಇಂದಿನಂತಾಗುತ್ತಿದ್ದಿಲ್ಲ. ಷಾರವರು ಈ ಸಮಿತಿಯು ಜನಾಂಗ ಸಭೆಯ ಕೌನ್ಸಿಲಿಗೆ ಅಂತರ್‌ರಾಷ್ಟ್ರೀಯ ಬೌದ್ಧಿಕ ಸಹಕಾರದ ವರದಿಯನ್ನೊಪ್ಪಿಸುತ್ತದೆಂದು ಹೇಳಿದ್ದಾರೆ.

**ವಿಚಾರಣೆ**

ಅಂತರ್‌ರಾಷ್ಟ್ರೀಯ ನ್ಯಾಯಸ್ಥಾನದಲ್ಲ ಬೇಟ್ಲರ್, ಬೊಂಬಾರ್ಡೋನ್, ಫ್ಲೇಂಕೋ, ಮತ್ತು ಸರ್ ಆರ್ಫಿಯಸ್ ಮಿಡ್‌ಲೇಂಡರ್ ರವರು ತಮ್ಮಕ್ಷಪರವಾಗಿ ವಾದಿಸಿದ ಬಳಿಕ ಅವರೆಲ್ಲರೂ ಶುಂಠರು, ಕೊರಳುಕೊಯ್ಕರೆಂದು ನ್ಯಾಯಾಧಿಪತಿಗಳು ಹೇಳಿ ಕೂಡಲೆ ಅವರಿಗೆ ಶಿಕ್ಷೆಯನ್ನು ವಿಧಿಸಬೇಕೆನ್ನುತ್ತಾರೆ. ಆದರೆ ತಮಗೆ ಶಿಕ್ಷೆ ಕೊಡುವ ಅಧಿಕಾರವಿಲ್ಲದಿದ್ದುದಕ್ಕಾಗಿ ಮುಮ್ಮಲ ಮರುಗುತ್ತಾರೆ. ಹಾಗಾದರೆ ವಿಚಾರಣೆಯು ದೊಡ್ಡದೊಂದು ತಮಾಷೆಯೆಂದಾಗಲಿಲ್ಲವೆ? ನ್ಯಾಯಾಧಿಪತಿಗಳು "ಅಲ್ಲ" ವೆನ್ನುತ್ತಾರೆ. ಈ ಶುಂಠರೆಲ್ಲರೂ ಬಂದು ಸಿಕ್ಕಿಬಿಟ್ಟ ಮಾತಾಡಿದರು. ಮನಬಂದಂತೆ ವರ್ತಿಸಿದರು, ಕೊನೆಗೂ ನಮ್ಮನ್ನು ಕಡೆಗಣಿಸಿ 'ವಿರೋಧಿಸಿದರು' ಎಂಬ

ಶೋಚನೀಯ ಮಾತುಗಳನ್ನಾಡುತ್ತಾರೆ.

**ಹಿಟ್ಲರನ ಜನಾಂಗಸಭೆ!**

ಎಲ್ಲರೂ ಹಿಟ್ಲರನಿಗೆ ಶರಣೆನ್ನುತ್ತಿರುವಾಗ ಜರ್ಮನಿಯ ಈ ಮಹಾಶಯನು ಜನಾಂಗಸಭೆಯನ್ನು ಸುಧಾರಿಸಿ ತನ್ನಿಚ್ಛೆಯಂತೆ ರಚಿಸಲು ಬೇಕಾದ ಸಿದ್ಧತೆಗಳನ್ನು ಮಾಡುತ್ತಿರುವನೆಂದು 'ಮೆಂಚೆಸ್ಟರ್ ಗಾರ್ಡಿಯನ್" ಪತ್ರಿಕೆಯು ಹೇಳುತ್ತಿದೆ. ಹಿಟ್ಲರನು ಬೇರೆಯೇ ಒಂದು ಸಭೆಯನ್ನು ಸ್ಥಾಪಿಸುವನೋ ಅಥವಾ ಈಗಿನ ಜನಾಂಗಸಭೆಯ ನಿಯಮಗಳನ್ನು ತನಗೆ ಬೇಕಾದಂತೆ ವ್ಯತ್ಯಾಸಗೊಳಿಸುವನೋ ಎಂಬುದು ಸರಿಯಾಗಿ ತಿಳಿದಿಲ್ಲ. ಆದರೆ ಕಾಯಮಾಗಿರುವ ಒಂದು ಸಂಸ್ಥೆಯೂ ಯೋಗ್ಯ ಸೆಕ್ರೆಟೇರಿಯಟೂ ಇರಬೇಕೆಂದು ಹಿಟ್ಲರನು ಅಭಿಪ್ರಾಯಪಟ್ಟಿರುವುದು ಖಂಡಿತ. ಸೋವಿಯೆಟ್ ರಷ್ಯವು ಜನಾಂಗಸಭೆಯ ನಿಯಮಗಳ ಬದಲಾವಣೆಗೆ ಒಪ್ಪಲಾರದಲ್ಲದೆ ಜರ್ಮನಿಗೆ ಲೀಗಿನ ಕೌನ್ಸಿಲಿನಲ್ಲಿ ಒಂದು ಸ್ಥಾನ ಕೊಡುವುದಕ್ಕೂ ಸಮ್ಮತಿಯನ್ನೀಯಲಿಕ್ಕಿಲ್ಲ. ವಸ್ತುಸ್ಥಿತಿಯು ಹೀಗಿರುವುದರಿಂದ ಇಟೆಲಿ, ಜರ್ಮನಿ, ಫ್ರಾನ್ಸು ಮತ್ತು ಇಂಗ್ಲೆಂಡುಗಳು ಒಂದಾಗುವ ಒಂದು ಯೋಜನೆಯು ಮುಂದೆ ಜಾರಿಗೆ ಬರಲೂ ಬಹುದು.

**ಜನಾಂಗಸಭೆಯ ಅಧಿಕಾರಿಗಳಲ್ಲಿ ಬದಲಾವಣೆ.**

ಈಗಾಗಲೆ ಜನಾಂಗಸಭೆಯ ಸೆಕ್ರೆಟೇರಿಯೇಟಿನ ಯೋಗ್ಯ ಅಧಿಕಾರಿಗಳು ಸರ್ವಾಧಿಕಾರಿಗಳ ತತ್ವಕ್ಕೆ ತಲೆಬಗ್ಗಿಸಲು ಸಿದ್ಧರಾಗಿಲ್ಲದಿರುವುದರಿಂದ ತಮ್ಮ ಕೆಲಸಕ್ಕೆ ರಾಜಿಯಿತ್ತಿದ್ದಾರೆ. ಮಾರ್ಸೆಲ್ ಹಾಡೆನ್ ಎಂಬ ಕಾಯಂ ಅಧಿಕಾರಿಯನ್ನು ಮೊನ್ನೆ ಕೆಲಸದಿಂದ ತೆಗೆದು ಹಾಕಿದ್ದಾರೆ. ಈ ವಿದ್ಯಮಾನದ ಹಿಂದೆ ಹಿಟ್ಲರನ ಕೈಯ್ಯಿದೆಯೆಂದು ಹೇಳಲಾಗಿದೆ. ಈಗ ಜನಾಂಗ ಸಭೆಯು 'ಹೊರಗಣ ಅಧಿಕಾರಿಗಳಿಂದಲೂ ಕೆಲವೊಮ್ಮೆ ಆಜ್ಞೆಗಳನ್ನು ಪಡೆಯಬೇಕಾಗುತ್ತದೆ. ಒಟ್ಟಿನ ಮೇಲನ್ನುವುದಿದ್ದರೆ ಬರ್ನಾರ್ಡ್ ಷಾರವರ "ಜಿನೇವಾ" ನಾಟಕವು ಸಮಯೋಚಿತವಾಗಿದ್ದು ಬ್ರಿಟಿಷರ ಇಂದಿನ ಪ್ರಜಾಸತ್ತಾತ್ಮಕ ಧೋರಣೆಯ ಶುಷ್ಕರೂಪ, ಸರ್ವಾಧಿಕಾರಿಗಳ ಕಾಡು ಮನೋವೃತ್ತಿ ಇವೇ ಮೊದಲಾದುವುಗಳನ್ನು ಎತ್ತಿ ತೋರಿಸುತ್ತಿದೆ

---

ಉತ್ತಮಾ ವಸ್ಥೆಯಲ್ಲಿರುತಿತ್ತು. ಆದರೆ ನಗ್ನವಾದಕ್ಕೆ ವಿರೋಧವಾಗಿರುವವರು ಬತ್ತಲೆಯಾಗಿರುವವರನ್ನು ನಾನಾ ರೀತಿಯಲ್ಲಿ ಬಯ್ಯುತ್ತಿರುವುದು ಶೋಚನೀಯವಾಗಿದೆ. ಧರ್ಮದ ಹೆಸರಿನಲ್ಲಿ ಬಣ್ಣಿಸಲಾಗದ ಅತ್ಯಾಚಾರಗಳನ್ನು ಮಾಡುತ್ತಿರುವ ಧಾರ್ಮಿಕ ಅಧಿಕಾರಿಗಳು-ನಗ್ನವಾದಿಗಳೆಂದರೆ ಕೇವಲ ಶರೀರ ಸುಖವನ್ನು ಪಡೆಯಲು ಸುಲಭೋಪಾಯ ಮಾಡಿಕೊಂಡವರೆನ್ನುವುದು ಅವರ ಅಜ್ಞಾನವನ್ನು ತೋರಿಸುತ್ತಿದೆ. ಆದರೆ ಇಂತಹ ವಿಮರ್ಶೆಗಳು ಕೇವಲ ನಿರಾಧಾರವಾಗಿವೆ. ನಗ್ನವಲಯಕ್ಕೆ ಹೊಸಬರಿಗೆ ಒಮ್ಮೆಯೇ ಪ್ರವೇಶಕೊಡುವುದಿಲ್ಲ. ಅವರಿಗೆ ವಿಷಯೇಂದ್ರಿಯಗಳಲ್ಲಿ ಜಿಗುಪ್ಸೆ ಹುಟ್ಟಿದ ಬಳಿಕವೇ ವಲಯದೊಳಗೆ ಅವರಿಗೆ ಪ್ರವೇಶಸಿಗುತ್ತದೆ.



ಈ ಸಂದರ್ಭದಲ್ಲಿ ನಗ್ನವಲಯದ ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಅಪ್ರಕೃತವೆನಿಸಲಾರದು. ಅಮೇರಿಕದಲ್ಲಿರುವ ಅನೇಕ ನಗ್ನವಲಯಗಳಲ್ಲಿ ತರುಣರು ತರುಣಿಯರು, ಮಕ್ಕಳು ಮತ್ತು ಮುದುಕರಿದ್ದಾರೆ. ಅವರ ನೀತಿಯ ಮಟ್ಟವು ಇತರ ನಾಗರಿಕರಿಗಿಂತ ಯಾವ ರೀತಿಯಲ್ಲಿಯೂ ಕಡಿಮೆಯಾಗಲಿಲ್ಲ. ಅವರಲ್ಲಿ ಹೆಚ್ಚಿನವರು ಪುಷ್ಟಕಾಯರಾಗಿರುವುದಲ್ಲದೆ ಸೂರ್ಯರಶ್ಮಿಯ ಪ್ರಭಾವದಿಂದ ಅವರ ಮೈಕಾಂತಿಯು ಎಂದಿಗಿಂತಲೂ ಚೆನ್ನಾಗಿದೆ. ನಗ್ನವಲಯಗಳಲ್ಲಿರುವವರೆಲ್ಲರೂ ನಗ್ನರಾಗಿದ್ದಾರೆ. ಯಾರೂ ಒಂದಿನಿತು ಬಟ್ಟೆಯನ್ನುಪಯೋಗಿಸುವುದಿಲ್ಲ ಪುರಾತನಕಾಲದಂತೆ ಸ್ನಾನ ಮಾಡಿದರೆ ಮೈಯ್ಯಲ್ಲುಳಿಯುವ ನೀರನ್ನುಸೂರ್ಯರಶ್ಮಿಯೇ ಒಣಗಿಸುತ್ತದೆ. ಚುಟುಕಾಗಿ ಹೇಳುವುದಿದ್ದರೆ ಅವರ ಜೀವನವು ಸ್ವಾಭಾವಿಕವಾಗಿದೆ.



ನಗ್ನವಲಯಕ್ಕೆ ಸೇರುವವರು ಸುಮಾರು ಸಮಯದ ತನಕ ವಲಯದಲ್ಲಿರುವವರನ್ನು ನೋಡಲೇ ಬೇಕೆಂಬ ನಿಯಮವಿದೆ. ಪ್ರಾರಂಭದಲ್ಲಿದ್ದ ವ್ಯಕ್ತಿಗೆ ನಗ್ನ ದೇಹದ ಸೌಂದರ್ಯವನ್ನು ಕಾಣುವಾಗ ಮನಸ್ಸು ವಿಕಾರವಾಗಬಹುದಾದರೂ ಸ್ವಲ್ಪ ಸಮಯದ ನಂತರ ಆ ವಿಕಾರವು ನಿಂತು ಹೋಗಿ ಒಂದು ತರದ ಜಿಗುಪ್ಸೆಯುಂಟಾಗುತ್ತದೆ ಅನಂತರ ನಗ್ನ ದೇಹವನ್ನು ಕಂಡೊಡನೆ ಮನೋವಿಕಾರಗಳುಂಟಾಗುವುದಿಲ್ಲ. ನಗ್ನ ವಲಯದ ಶಿಷ್ಟ ಸಂಪ್ರದಾಯಗಳಿಗನುಸಾರವಾಗಿ ಪ್ರತಿ

(೨೪ನೇ ಪುಟ ನೋಡಿರಿ.)



### ನಿಮ್ಮನ್ನು ಹೆದರಿಸುವ ಆ ಜೈಲು!





# ಏಳು ವರುಷಗಳ ಯುಗಾರಂಭದ ದಿನ!

ಢಕಾಯಿತಿನ ತಕ್ಷೀರಿಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮ ಕಥೆಯಿದು.

ಸ್ರೆ, ನಾನು ಏಳು ವರ್ಷದ ಕೈದಿಯಾಗಿ ರಿಜರ್ವ ಪೋಲೀಸರ ವಶಕ್ಕೊಪ್ಪಿಸಲ್ಪಟ್ಟೆ. ಯಾವ ಅಪರಾಧವನ್ನೂ ಮಾಡಿರದ ನನ್ನ ಕೈಗೆ ಕಬ್ಬಿಣದ ಬಳೆ ಬಿತ್ತು. ಆರು ಮಂದಿ ಧಾಂಡಿಗ ಪೋಲಿಸರು ನಮ್ಮನ್ನು ಮಧ್ಯದಲ್ಲಿರಿಸಿಕೊಂಡು ಸಬ್ ಜೈಲಿನ ಕಡೆಗೆ ಸಾಗಿಸಿದರು. ನನಗೆ ಶಿಕ್ಷೆ ವಿಧಿಸಲ್ಪಟ್ಟು ಕೆಲವು ಮಿನಿಟುಗಳು ಕಳೆದಿದ್ದವು. ಈ ವಾರ್ತೆಯು ಊರಿಗೆ ಅಷ್ಟು ಬೇಗನೆ ಮುಟ್ಟಿರಲಿಕ್ಕಿಲ್ಲ. ಆದರೆ ಸಾಕ್ಷಾತ್ ಜೈಲಿನ ಕಡೆಗೆ ಆ ರಾಜರಸ್ತೆಯಲ್ಲಿ ಸಾಗುತ್ತಿದ್ದ ನನಗೆ ಮನೆಯಲ್ಲಿ ಹೆಂಡತಿ ಮತ್ತು ತಾಯಿ ಬೊಬ್ಬೆ ಹೊಡೆಯುತ್ತಿರುವ ರೋದನವು ಕೇಳಿಬರುತ್ತಿತ್ತು. ಮೋಟಾರಿನ ಹೋರ್ನಾಗಲೀ, ಜಟ್ಕಾವಾಲನ ಹೈಕಾರವಾಗಲೀ ನನಗೆಕೇಳಿಸುತ್ತಿದ್ದಿಲ್ಲ. ಆ ಜನನಿಬಿಡ ರಸ್ತೆಯಲ್ಲಿ ಕೂಡಾ ನನಗೆ ಕೇಳಿಸುತ್ತಿದ್ದುದು ನನ್ನ ಮನೆಯ ರೋದನ! ಅತ್ತ ಇತ್ತ ಹೋಗುವವರು, ಅವಸರದ ಕೆಲಸವಿಲ್ಲಹವರು ಒಂದರೆ ಘಳಿಗೆ ನಿಂತು ನಮ್ಮನ್ನೇ ನೋಡುತ್ತಿದ್ದರು. ನನ್ನನ್ನು ದೃಷ್ಟಿಸಿ ನೋಡಿ 'ಕಳ್ಳನ ಕಣ್ಣುಗಳೆಂದರೆ ಹೀಗೆಯೇ' ಎಂದು

### ಲೇಖಾಂಕ ೫.

ಕಳ್ಳಕಣ್ಣಿನ ಪರಿಚಯ ಮಾಡಿಕೊಂಡು ಹೋಗಿರಬಹುದು ಅವರು. ಆದರೆ ನನ್ನ ಕಣ್ಣಿಗೆ ಮನೆಯ ಅಳುಮೋರೆಗಳೆರಡು ಮಾತ್ರ ಕಾಣಿಸುತ್ತಿದ್ದವು. ಆದರೇನು ಮಾಡಲಿ? ನಾನು ಕಾಣದ್ದನ್ನು- ನೆನಸದ್ದನ್ನು- ಪೋಲೀಸರು ಕಂಡುಕೊಂಡಿದ್ದರು: ನನ್ನ ಕಣ್ಣಿಗೆ ಕಾಣುತ್ತಿದ್ದ ಆ ಅಳುಮೋರೆಗಳು ಪೋಲಿಸರಿಗೆ ಕಾಣಿಸುತ್ತಿದ್ದಿಲ್ಲ. ನನ್ನ ಮತ್ತು ಪೋಲಿಸರ ಗ್ರಹಗತಿಗಳೇ ಪರಸ್ಪರ ವಿರುದ್ಧವಿದ್ದಾಗ ನಾನಾಗಲೀ ಪೋಲಿಸರಾಗಲೀ ಏನುತಾನೆ ಮಾಡಲು ಸಾಧ್ಯ?

### ನಾನು ಕಾಲಿಟ್ಟ ಘಳಿಗೆ

ನಾನಾಗಿ ನಡೆದುದೂ ಅಲ್ಲ, ಪೋಲಿಸರು ಕೊಂಡುಹೋದುದೂ ಅಲ್ಲ-ನನ್ನಗ್ರಹಚಾರ ಎಳೆದು ಕೊಂಡು ಹೋಯಿತೆಂದೇ ಹೇಳುವೆನು. ಅಂತೂ ನನ್ನೊಡನೆ ಪ್ರಪಂಚವೇ ಚಲಿಸುತ್ತಿತ್ತೆಂದು ನನ್ನ ಭಾವನೆ. ನನಗೆ ಇದಿರಿನಲ್ಲಿ ಬಿಳಿಯ ಗೋಡೆಗಳು ಕಂಡುಬಂದವು. ಅವು ನನ್ನ ಮೇಲೆ ಜರಿದು ಬೀಳುವ ಸಲುವಾಗಿಯೋ ಅಷ್ಟು ಎತ್ತರಕ್ಕೂ ನಿಂತಿರುವಂತೆ ನನಗೆ ಕಂಡಿತು. ಸ್ವಲ್ಪ ಸಮಯದಲ್ಲಿಯೇ ಕಬ್ಬಿಣದ ಸರಳುಗಳುಳ್ಳ ಗೇಟಿನ ಇದಿರಲ್ಲಿ ಬಂದು ನಿಂತೆವು. ಬಾಗಿಲು ನಮಗಾಗಿ ತೆರೆಯಲ್ಪಟ್ಟಿತು. ಆ ಬಾಗಿಲು ತೆರೆಯಲ್ಪಡುವಷ್ಟು ಸಲವೂ ಒಂದೊಂದುಹೊಸಸಂಗತಿಯನ್ನು ಮಾನವ ಚರಿತ್ರೆಯೊಳಗೆಹೊಗಿಸುತ್ತಲೇ ಉಂಟಲ್ಲ! ಇಷ್ಟೊಂದು ಪ್ರಾಮುಖ್ಯತೆಯುಳ್ಳ ಕದವು ಲೋಕದಲ್ಲಿ ಮತ್ತಾವುದಿದೆ? ಈ ಬಾಗಿಲು ತಮಗಾಗಿ ತೆರೆಯಲ್ಪಡಬಾರದೆಂಬುದರ ಸಲುವಾಗಿಯೇ ಹೆಬ್ಬಾಗಿಲನ್ನು ಒತ್ತೆಯಿಡುವವರೆಷ್ಟು ಮಂದಿ! ಈ ಬಾಗಿಲು ತಮ್ಮ ಪಾಲಿಗೆ ಮುಚ್ಚಿಕೊಂಡೇ ಇರಬೇಕೆಂದು ತಮ್ಮ ಮನೆಬಾಗಿಲು ಹಾಕಿಕೊಂಡು ದಿನಗಟ್ಲೆ ಒಳಗೆ ಕೊಳೆಯುವವರೆಷ್ಟು ಮಂದಿ! ಈ ಬಾಗಿಲಿಗಂಜಿ ಅನ್ಯರ ಮನೆಬಾಗಲಲ್ಲಿ ಬಿದ್ದು ದಮ್ಮಯ್ಯ ಹಾಕುವವರೆಷ್ಟು ಮಂದಿ! ಇಂತಹ ಕಾರಣಿಕವುಳ್ಳ ಬಾಗಿಲನ್ನು- ಒಂದು ಹೊಸ ಜನ್ಮವನ್ನೆ- ನಾನು ಪ್ರವೇಶಿಸಿದೆ. ನಮ್ಮೊಟ್ಟಿಗೆ ಅಲ್ಲಿಯವರೆಗೂ ಬಂದಿದ್ದ ರಿಜರ್ವ್ ಪೋಲಿಸರು ಹೊರಗೆಯೇ ನಿಂತರು. ಒಳಹೋಗುವ ಅಧಿಕಾರ ನನಗೆಮಾತ್ರ

ಆ ವರೆಗೆ ನಮ್ಮ ಮೇಲೆ ಅಧಿಕಾರ ತೋರಿಸಿದ್ದ ಪೋಲಿಸರಿಗೆ ನಮಗಿದ್ದ ಅಧಿಕಾರವಿಲ್ಲ! ಒಳಗೆ ಕಾಲಿಟ್ಟೊಡನೆ ಖಾಕೀಪೋಷಾಕು, ಮತ್ತು ಹಾಲಕ್ಕಿ ನರ್ಸಣ್ಣನ ಮುಂಡಾಸನ್ನು ತಕ್ಕ ಮಟ್ಟಿಗೆ ಹೋಲುವ ಟೋಪಿಯಿದ್ದ ಜೈಲು ವಾರ್ಡರನು ನಮ್ಮನ್ನಿದಿರುಗೊಂಡ. ಜೈಲಿನ ಮುಂಭಾಗದಲ್ಲಿ ಒಂದು ಬದಿಗಾಗಿ ಆಫೀಸಿಗೆ. ಕೈದಿಯು ಒಳಗೆ ಪ್ರವೇಶಿಸಿದೊಡನೆ ಅವನನ್ನು ಆಫೀಸಿಗೆ ಕೊಂಡು ದಾಖಲೆ ಮಾಡಿಕೊಳ್ಳುವ ಕ್ರಮವಿದೆ. ವಾರ್ಡರನು ನಮ್ಮನ್ನು ಅಲ್ಲಿಗೆ ಕೊಂಡುಹೋದ. ಕೈಬದಲಾವಣೆ ಮಾಡಿದ್ದ ಪೋಲಿಸರು ಹೊರಭಾಗದಲ್ಲಿ ಕಿಟಕಿಯ ಬಳಿ ನಿಂತುಕೊಂಡಿದ್ದರು; ನಮ್ಮನ್ನು ದತ್ತವಾಗಿ ಸ್ವೀಕರಿಸಿದ ವಾರ್ಡರು ಒಳಗೆ ನಮ್ಮ ಬಳಿಯಲ್ಲಿದ್ದ. ಆಫೀಸಿನಲ್ಲಿ ಕುರ್ಚಿಯಲ್ಲಿ ಕುಳಿತುಕೊಂಡಿದ್ದ ಚೀಫ್ ವಾರ್ಡರರು ತಮಗೆ ತಲಪಿದ ಸಾಮಾನುಗಳ (ಮೂರು ಮನುಷ್ಯ ಜೀವಿಗಳ) ಬಗ್ಗೆ ರಿಜರ್ವ್ ಪೋಲಿಸರಿಗೆ ರಶೀದಿ ಕೊಟ್ಟು ಕಳುಹಿಸಿದರು. ಆ ಮೇಲೆ ನಮ್ಮ ಹೆಸರು ವಿಳಾಸ, ಕೇಸಿನ ವಿವರಗಳ ಕುರಿತು ನಮ್ಮನ್ನು ಪ್ರಶ್ನಿಸಿ ತಿಳಿದುಕೊಂಡರು. ಚೀಫ್ ವಾರ್ಡರರು ಬರೆಯಲು ಬಗ್ಗುವಾಗ 'ಹೇಗೂ ಹೆಂಡತಿ ಮಕ್ಕಳಿಗೆ ಮನೆ ಮಾಡಿ ಬಂದಿರಲ್ಲ ಘಟಿಂಗರು!' ಎಂದರು. ನನಗೆ ಅದರಿಂದ ಬೇಸರವೆನಿಸುವ ಬದಲು ಒಂದು ವಿಧದ ಸಮಾಧಾನವಾಯಿತು. ಜೈಲಿನೊಳಗೆ ಹೋದೊಡನೆ ಕೆಲವು ಗುದ್ದುಗಳಾದರೂ ಬಿದ್ದೇತೀರುವವೆಂಬ ನಿರೀಕ್ಷೆಯಿತ್ತು ನನ್ನಲ್ಲಿ. ಆದರೆ ಪ್ರಥಮತಃ ಭೇಟಿಯಾದ ವಾರ್ಡರನು ನಮ್ಮನ್ನು ಕರಕೊಂಡು ಹೋಗುವ ಕೆಲಸವನ್ನಷ್ಟೇ ಮಾಡಿದುದೂ, ಈ ಆಫೀಸರರು ಕೂಡಾ ಅನ್ಯಮನಸ್ಕರಾಗಿ, ಇಷ್ಟೇ ಹೇಳಿ ಅಧಿಕಾರದ ಠೀವಿಯನ್ನು ಮಾತ್ರ ಪ್ರದರ್ಶಿಸಿದುದೂ ನನಗೆ ತೃಪ್ತಿಯನ್ನು ಕೊಟ್ಟಿತು.

### ದೇಹ ಜಡ್ತಿ

ಚೀಫ್ ವಾರ್ಡರರ ಆಜ್ಞೆಯಂತೆ ವಾರ್ಡರನು ನಮ್ಮನ್ನು ಒಬ್ಬೊಬ್ಬರನ್ನೇ ಇದಿರು ನಿಲ್ಲಿಸಿಕೊಂಡು ಅಂಗಿ ವಸ್ತ್ರವನ್ನು ಬಿಚ್ಚಿಹಾಕಲು ಆಜ್ಞೆ ಮಾಡಿದ. ನಾವು ಎಲ್ಲವನ್ನೂ ಕಳಚಿದೆವು. ವಾರ್ಡರನು 'ಹೂಂ' ಎಂದೊಡನೆಯೆ ಅವನ ಕೈ ತೋರಿದಂತೆ ನಡುಗುತ್ತಾ ಮಾಡಿ ತೋರಿಸಿದೆವು. 'ಎರಡೂ ಕೈಗಳನ್ನು ಮುಂದಕ್ಕೆ ಚಾಚು' ಎಂದು ಹೂಂಕರಿಸಿದ ವಾರ್ಡರ್. ನಾನು ಅಂತೆಯೇ ಮಾಡಿ ನಾಜೀ ಸೆಲ್ಯೂಟ್ ಹೊಡೆದೆ! ಬಾಯಿಯಲ್ಲಿ ಬ್ರಹ್ಮಾಂಡವಿರಬಹುದೆಂದೋ ಏನೋ-'ಬಾಯಿ ತೆರೆ ನಾಲಿಗೆ ಹೊರಹಾಕು!' ಎಂದ ವಾರ್ಡರ್. ಪೋಲಿಸರ ಗುದ್ದಿನಿಂದ ತೇಂಕುವಾಗ ಕೂಡ ಅಷ್ಟು ಉದ್ದವಾಗಿ ನನ್ನ ನಾಲಿಗೆ ಹೊರಬಿದ್ದುದಿಲ್ಲ- ಈಗ ಬುಡಮುಟ್ಟ ಹೊರಬಿತ್ತು ನಾಲಿಗೆ.

ಕೊನೆಗೆ ನಮ್ಮನ್ನು ಅವಧೂತಾವತಾರದಲ್ಲಿ ಬತ್ತಲೆ ನಿಲ್ಲಿಸಿ, ದೇಹದಲ್ಲಿದ್ದ ಗುಂಡಿ ಗುಂಪುಗಳಲ್ಲೆಲ್ಲಾ ಕೈಹಾಕಿ ನೋಡಿದರು. ಇಷ್ಟೆಲ್ಲಾ ಜಡ್ತಿ ಯಾಕೆ ಗೊತ್ತುಂಟೆ? ಜೈಲೆಂದರೆ ಪ್ರಪಂಚಕ್ಕಿಂತ ಭಿನ್ನವಾದ ಒಂದು ಲೋಕವಷ್ಟೆ. ಈ ಲೋಕದ ಯಾವ ವಸ್ತುವನ್ನೂ ಆ ಲೋಕಕ್ಕೆ ಕೊಂಡುಹೋಗಲು ಪಾಸ್‌ಪೋರ್ಟಿಲ್ಲ. ಆದರೆ ಪಾಸ್‌ಪೋರ್ಟಿಲ್ಲದೇನೆ ಎಷ್ಟು ಮಂದಿ ನಮ್ಮಂಥವರು ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೋಗುವದಿಲ್ಲ? ಹಾಗೆಯೇ ಜೈಲು ತಡಿಮೆಯನ್ನು ಹಲವು ಸಲ ದಾಟಿದ ಕೆಲವರು ನಾಲಿಗೆಯಡಿಯಲ್ಲಿ, ಲಂಗೋಟಿಯ ತುದಿಯಲ್ಲಿ – ನಿಮಗಾಶ್ಚರ್ಯವಾಗಬಹುದು. ಮೂಗಿನ ಸೊಳ್ಳೆಯೊಳಗೆ ಕೂಡಾ-ಪಾವಲಿಗಳನ್ನು ಇಟ್ಟುಕೊಂಡು ಬಂದುದುಂಟಂತೆ. ಇದರಿಂದ ಪಾಠ ಕಲಿತ ಜೈಲಧಿಕಾರಿಗಳು, ಕಳ್ಳರ ಗುಹೆಯೊಳಗೆ ಆಲಿಬಾಬನಿಣಿಕಿದಂತೆ ಬಂದವರೆಲ್ಲರ ಬಾಯಿ, ಮೂಗಿನ ಸೊಳ್ಳೆಗಳನ್ನು ಇಣಿಕಿಣಿಕಿ ನೋಡುವದಿತ್ತು. ಸರಿ, ನಮ್ಮ ದೇಹಜಡ್ತಿಯು ಮುಗಿಯಿತು. ನಮ್ಮ ವಸ್ತ್ರಗಳನ್ನು ಅಲ್ಲಿಯೇ ಗಂಟುಕಟ್ಟಿ ಇಡುವಂತೆ ಆಜ್ಞೆಯಾಯಿತು. ನಾವು ಹಾಗೆಯೇ ಮಾಡಿದ ಮೇಲೆ ಒಬ್ಬೊಬ್ಬರಿಗೊಂದೊಂದು ಮೊಣಕಾಲ ವರೆಗಿನ ಚಡ್ಡಿ, ಮತ್ತೊಂದೊಂದು ಬನಿಯನ್ ದೊರೆಯಿತು. ನಾನು ಈಗಲೂ ಆ ಚಡ್ಡಿ ಬನಿಯನುಗಳನ್ನು ನೆನಸಿಕೊಳ್ಳುವದಿದೆ. ಮೊನ್ನೆಯೊಬ್ಬರು ಈಜಾಟದ ಡ್ರೆಸ್ಸಿನಲ್ಲಿದ್ದ ಯುರೋಪಿಯನ್ ಮಹಿಳೆಯೊಬ್ಬಳ ಚಿತ್ರವನ್ನು ತೋರಿಸಿದಾಗ ನನಗೆ ಥಕ್ಕನೆ ಆ ಡ್ರೆಸ್ಸಿನ ನೆನಪಾಯಿತು. ಅಂಗಿಯ ಅರಿವೆಗಳಲ್ಲಿ ಇಷ್ಟೆನಮೂನೆಗಳಿವೆಯೆಂದು ಲೆಕ್ಕ ಮಾಡಿ ಹೇಳುವದು ಸಾಧ್ಯವಲ್ಲ. ಒಂದು ಅರಿವೆಯ ಗೀಟು ನೋಡಿ 'ಅದು ಇಂಥಾ ಸ್ಥಳದ ಅರಿವೆಯೇ ಇದೆ' ಎಂದು ಹೇಳಲಾಗುವದೂ ಇಲ್ಲ.

ಇಷ್ಟು ವೈವಿಧ್ಯವಿರುವ ಈ ಪ್ರಪಂಚದಲ್ಲಿ ಜೈಲು ಚಡ್ಡಿ ಹಾಕಿಕೊಂಡವನೊಬ್ಬನು ಹೊರಗೆ ಕಾಣಸಿಕ್ಕಿದನಾದರೆ ಅವನು ಬೇರೆ ಪ್ರಪಂಚದವನೆಂದು ನೀವು ಕೂಡಾ ಹೇಳಬಲ್ಲಿರಿ. ಅಂದರೆ ಅದರಲ್ಲಿ ಮಹಾ ವಿಶೇಷವೇನೋ ಉಂಟು ಎಂಬ ಅರ್ಥವಲ್ಲ. ಸಾಮಾನ್ಯ ಬಳಿ ಅರಿವೆಯ ಮೇಲೆ ಕಂಬಳಿಯ ಗೀಟಿನಂತೆ, ನೀಟಕ್ಕೂ ಅಡ್ಡಕ್ಕೂ ಸಮಾನತೆಯಲ್ಲಿರುವ ಗೀಟುಗಳ ಚಚ್ಚೌಕ ಕೋಣೆಯನ್ನು ನಿರ್ಮಿಸಿಟ್ಟಂತಿವೆ. ಈ ರೀತಿಗೆ ತುಸು ಹೆಚ್ಚುಕಡಿಮೆಯ ಗೀಟುಗಳಿರುವ ಅರಿವೆಗಳ ಸ್ವತಂತ್ರ ಜಗತ್ತಿನಲ್ಲಿ ಬೇಕಾದಷ್ಟಿವೆ. ಆದರೆ ಜೈಲಿನ ಅರಿವೆಯಂತಹ ಅರಿವೆಯಿರುವದು ಜೈಲಿನಲ್ಲಿಮಾತ್ರ. ಈಗ ಹರಡಿರುವ ಫೇಶನಿನ ಹುಚ್ಚು ಬೆಳೆದು ಬೆಳೆದು, ಎಲ್ಲಾ ಮಾದರಿಗಳನ್ನೂ ಮುಗಿಸಿ, ಜೈಲು ವಸ್ತ್ರದಂತಹ ವಸ್ತ್ರವೇ ಹೊಸ ಫೇಶನಾಗುವ ಕಾಲವೊಂದು ಬಂತೆಂದು ಭಾವಿಸಿಕೊಳ್ಳಿ; ಆಗ ಜೈಲು ವಸ್ತ್ರವು ಪ್ರಪಂಚದಲ್ಲಿಲ್ಲದ ಬೇರೆಯೇ ಒಂದು ಅವತಾರ ತಾಳಬಹುದು ಹೊರತು ಇಲ್ಲಿದ್ದಂತೆ ಅಲ್ಲಿಯೂ ಇರಲಾರದು. ನಾವು ಚಡ್ಡಿ ಬನಿಯನುಗಳನ್ನು ಸಿಕ್ಕಿಸಿಕೊಂಡೆವು. ಎರಡು ಕಂಬಳಿಗಳು, ಒಂದು ಹುರಿಹಗ್ಗದ ಚಾಪೆ, ಇಷ್ಟನ್ನು ಕೊಟ್ಟು ವಾರ್ಡರು ನಮ್ಮನ್ನು ಆಫೀಸಿನಿಂದ ಒಳಗಿನ ಬ್ಲೋಕಿಗೆ ಕರೆದುಕೊಂಡು ಹೋದ. ಅದೊಂದು ವಿಶಾಲವಾದ ಕೋಣೆ. ಒಳಗೆ ಎರಡೂ ಪಕ್ಕಗಳಲ್ಲಿ ಒಬ್ಬನು ಮಾತ್ರ ಮಲಗುವಷ್ಟು ಉದ್ದಗಲದ ಜಗಲಿಗಳು ಈ ಕಡೆಯಿಂದ ಆ ಕಡೆಯ ವರೆಗೂ ಇದ್ದವು. ಒಂದು ಜಗಲಿಯಿಂದ ಇನ್ನೊಂದು ಜಗಲಿಯ ನಡುವೆ ಆ ಜಗಲಿಯಷ್ಟೇ ಉದ್ದಗಲಕ್ಕೆ ತಗ್ಗು ಸ್ಥಳವಿತ್ತು. ವಾರ್ಡರು ನಮಗೊಂದು ಜಗಲಿಯನ್ನು ತೋರಿಸಿ, ಕಂಬಳಿ ಮೂಟೆಯನ್ನು ಅದರಲ್ಲಿಡಿಸಿದ. ಕೆಲಸಕ್ಕೆ ಹೋಗಿದ್ದ ಕೈದಿಗಳ ಗುಂಪು ಆ ಹೊತ್ತಿಗೆ ಬ್ಲೋಕನ್ನು ನುಗ್ಗಿತು. ಎಲ್ಲರೂ ಹೊಸಬರೇ- ಆದರೂ ನಮ್ಮವರೇ! ದೊಡ್ಡ ಸಣ್ಣ ಮಕ್ಕಳನ್ನು ಮಾಡಿ ಹಾಕಿದ ತಂದೆ, ಮಾರುಗಟ್ಲೆ ಅರಿವೆ ಪಹಿಸಿ ಎಲ್ಲಾ ಮಕ್ಕಳಿಗೂ ಒಂದೇ ನಮೂನೆಯ ಚಡ್ಡಿ-ಅಂಗಿಗಳನ್ನು ಹೊಲಿಸಿ ಹಾಕುವದುಂಟಲ್ಲ- ಆ ರೀತಿ ನಾವು ಒಬ್ಬರನ್ನೊಬ್ಬರು ನೋಡುವಾಗ ಅಣ್ಣ-ತಮ್ಮಂದಿರಾಗಿ ಕಂಡು ಬಂದೆವು. ಸತ್ಯಕ್ಕೂ ಹಾಗೆಯೇ ಅನ್ನಿ. ಬಂದವರೆಲ್ಲರೂ ಪಿಳಪಿಳನೆ ನಮ್ಮನ್ನು ನೋಡಹತ್ತಿದರು. ಆದರೆ ಅವರಿಗೆ ಸಮಯವೆಲ್ಲಿದೆ? ದಡಬಡನೇ ಬಟ್ಟಲು ತಟ್ಟೆಗಳನ್ನು ಎತ್ತಿಕೊಂಡು ಅವಸರವಸರದಿಂದ ಹೋಗ ಹತ್ತಿದರು. ನಮಗೂ ವಾರ್ಡರನಿಂದ ತಟ್ಟೆ ಬಟ್ಟಲುಗಳು ದೊರೆತವು. ಮಕ್ಕರೊಡನೆ ಹೋಗಿ ಕುಳಿತುಕೊಳ್ಳುವಂತೆ ವಾರ್ಡರ ಸನ್ನೆ ಮಾಡಿದ. ಕಳ್ಳರೇ ತುಂಬಿದ್ದ ಅಲ್ಲಿ ನಾವು ಮಾತ್ರ ಕಳ್ಳರು! ಯಾಕೆ ಗೊತ್ತುಂಟೆ? ಮಿಕ್ಕವರೆಲ್ಲಾ ಅನ್ನ-ಪಚ್ಚೆಕರಿ ಕಷಾಯವನ್ನು ಬರ ಮಾಡಿಕೊಳ್ಳುವ ಆತುರದಲ್ಲಿದ್ದರು. ಅವರ ದಿನದಲ್ಲಿ ಅದು ಉತ್ಸಾಹದ ಸಮಯ. ನಾವು ಮೂವರು ಹಾಗಲ್ಲ, ಹೊಸಬರು. ಬಟ್ಟಲನ್ನು ಎತ್ತುವಾಗ, ತಟ್ಟೆಯಿಡುವಾಗ 'ಏನೋ-ಹೇಗೋ' ಎಂದು ಹೆದರುತ್ತಿದ್ದೆವು, ಕಳ್ಳರಾಗಿಯೇ ಇದ್ದೆವು. ಸಾಲಿನಲ್ಲಿ ಕ್ರಮಪ್ರಕಾರ ಬೀಳುತ್ತಾ ಬಂದ ಅನ್ನದ ಮುದ್ದೆಯೊಂದು ನನ್ನ ಬಟ್ಟಲಿಗೂ ಬಿತ್ತು. ತಟ್ಟೆಯು ಸೆಗಣಿನೀರಿನಂತಹ ಒಂದು ರಸದಿಂದ ಮುಕ್ಕಾಲುಭಾಗ ತುಂಬಿತು. ಮುಂದಕ್ಕೆ ಕೆಲವು ವರುಷಗಳ ತನಕ ನನ್ನ ಜೀವವನ್ನುಳಿಸಿಕೊಟ್ಟ ಆ ಹಸುರುವರ್ಣದ ಇಡ್ಲಿ-ಪಚ್ಚೆಕರಿಯನ್ನು ನಾನು ಮೊದಲನೇ ಭಾರಿ ಕಂಡೆ; ಕಂಡುದಷ್ಟೇ ಅಲ್ಲ, ಬಹು ಪ್ರಯಾಸದಿಂದ ಉಂಡೆ. ಪ್ರಥಮ ಬಾರಿ ನನಗಾದ ಆ ಅನುಭವವನ್ನು ಇಲ್ಲಿ ವರ್ಣಿಸಲು ಸಾಧ್ಯವಾಗದು. ನಾನಂದು ಸ್ವೇಚ್ಛೆಯಿಂದ ಉಂಡುದಲ್ಲ- ನನ್ನಂತಹ ಇತರ ಕೈದಿಗಳು ಉಣ್ಣುತ್ತಿರುವಾಗ ಸುಮ್ಮನಿರಲು ಜೈಲಿನಲ್ಲಿ ನನಗಧಿಕಾರವುಂಟೇ?- ಎಂಬ ಹೆದರಿಕೆಯಿಂದ.

ಊಟತೀರಿದೊಡನೆ ನಮ್ಮನ್ನೆಲ್ಲಾ ಕೋಣೆಯೊಳಗೆ ಒಟ್ಟು ಸೇರಿಸಿ ಬಾಗಿಲು ಹಾಕಿದರು. ನನಗೆ ದೊರೆತ ಕಂಬಳಿಯನ್ನಾದರೂ ಬಿಡಿಸಿ ಮಲಗೋಣವೆಂದರೆ ಅಲ್ಲಿದ್ದವರು ಬಿಡುತ್ತಾರೆಯೇ? ಎಲ್ಲರೂ ನಮ್ಮನ್ನು ಮಾತನಾಡಿಸಹತ್ತಿದರು.

ನಾನು ಉತ್ತರ ಕೊಟ್ಟುಕೊಟ್ಟು ಸೋತು ಹೋದೆ. ಒಬ್ಬ ಮುದುಕ ಮೂರೂರಿನವನಂತೆ. ಜೈಲಿನಲ್ಲಿದ್ದ ಅವನಿಗೆ ಮೂರೂರಿಗೆ ಇಪ್ಪತ್ತು ಮೈಲು ದೂರದ ನನ್ನ ಗ್ರಾಮವು ನೆರೆಯೂರಾಗಿ ಕಂಡುಬಂದು ತನ್ನ ಮನೆಯ ಯೋಗಕ್ಷೇಮವನ್ನು ಹೇಳಬೇಕೆಂದು ಕಾಡಹತ್ತಿದ— ನನಗೆ ಸಾಧ್ಯವಾಗದುದನ್ನು ಕಂಡು ಗಳಗಳನೆ ಅತ್ತು ಬಿಟ್ಟ!

**ಸಬ್ ಜೈಲಿನಲ್ಲಿ ನಾನಿದ್ದುದು ಒಂದು ರಾತ್ರಿಯ ಅತಿಥಿಯಾಗಿ ಮಾತ್ರ. ನನ್ನ ನಿಜವಾದ ಜೈಲುಜೀವನವು ಪ್ರಾರಂಭವಾದುದು ಕನ್ನಾನೂರು ಜೈಲಿನಲ್ಲಿ. ಅಲ್ಲಿಯ ವಿವರವನ್ನು ಬರುವ ವಾರದ ಸಂಚಿಕೆಯಲ್ಲಿ ತಿಳಿಸುವೆನು.**

---

## ಅಂತರಂಗ ಸ್ಪರ್ಧೆ.

**ಅಂತರಂಗದ ಒಂದನೆಯ ಸ್ಪರ್ಧೆಯ ಕೂಪನುಗಳು ಈ ಸಂಚಿಕೆಗೆ ಮುಗಿಯುತ್ತವೆ. ಸ್ಪರ್ಧೆಯನ್ನು ಬಿಡಿಸಿ, ೨೫ ರೂಪಾಯಿಗಳ ಬಹುಮಾನವನ್ನು ಪಡೆಯಲಿಚ್ಛಿಸುವವರು ತಮಗೆ ಬೇಕೆನಿಸುವಷ್ಟು ಉತ್ತರಗಳನ್ನು ಈ ತಿಂಗಳ ಕೂಪನುಗಳಲ್ಲಿಯೇ ಬರೆದು ಕಳುಹಿಸತಕ್ಕದ್ದು.**

**ಮುಂದಿನ**
**— ಸಂಚಿಕೆಯಲ್ಲಿ —**
**ಎರಡನೆ ಅಂತರಂಗ ಸ್ಪರ್ಧೆಯನ್ನು ನಿರೀಕ್ಷಿಸಿರಿ!**

(೧೯ನೆ ಪುಟದಿಂದ)

ಯೊಬ್ಬರೂ ತಮ್ಮ ಮುಖಗಳನ್ನೇ ನೋಡಿ ಮಾತಾಡಬೇಕಲ್ಲದೆ ಅನ್ಯಥಾ ವರ್ತಿಸಬಾರದು.



ನಗ್ನ ವಲಯದವರು ಬ್ರಹ್ಮಚರ್ಯವನ್ನು ಪಾಲಿಸುವವರೆಂದು ಹೇಳಬಹುದಾಗಿದ್ದರೂ ಅವರು ಭೋಗ ಸುಖವನ್ನು ಪಡೆಯುತ್ತಾರೆ. ಆದರೆ ಈ ವಲಯಗಳಲ್ಲಿ ಅನಾಚಾರಗಳಾಗುವುದು ಬಹಳ ಕಡಿಮೆಯೆಂದು ಹೇಳಬಹುದಾಗಿದೆ. ನಗ್ನವಾದವು ಸಮಗ್ರ ವಿಶ್ವದಲ್ಲಿ ಪ್ರಚಾರವಾದರೆ ಪ್ರಬಲ ಪ್ರಶ್ನೆಯಾದ ಬಟ್ಟೆಬರೆಗಳ ಸಮಸ್ಯೆಯನ್ನು ಬಿಡಿಸಿದಂತಾಗುವುದಲ್ಲದೆ ಮಾನವ ಜಾತಿಯ ಗುಣ. ನೀತಿ ಮತ್ತು ಆರೋಗ್ಯ ಪರಿಸ್ಥಿತಿಯು ಚೆನ್ನಾಗಬಹುದು.



# ಅಂತರಂಗ

**ಆದಿತ್ಯವಾರ, ನವಂಬರ ೨೭, ೧೯೩೮.**

## ಜಿಲ್ಲೆಯ ಕಾಂಗ್ರೆಸ್ ಕೆಲಸಗಾರರಲ್ಲಿ -

ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಕಮಿಟಿಯೊಳಗಿನ ಅಂತಃಕಲಹಗಳು ಉಗ್ರಸ್ವರೂಪವನ್ನು ತಾಳಿವೆಯೆಂದು ಈಗಿನ ವಾದವಿವಾದಗಳಿಂದ ವ್ಯಕ್ತವಾಗುತ್ತದೆ. ಈಗ ಅಧಿಕಾರದಲ್ಲಿರುವವರು ಮತ್ತು ಅವರಲ್ಲಿ ವಿಶ್ವಾಸವನ್ನು ಕಳೆದುಕೊಂಡವರು ಪರಸ್ಪರ ಹೇಯವಾದ ಆರೋಪಗಳನ್ನು ಹೊರಿಸಿಕೊಂಡು ಕಾಂಗ್ರೆಸ್ ಸಂಸ್ಥೆಯ ಹೆಸರನ್ನೇ ಕೆಡಿಸಿಕೊಳ್ಳುತ್ತಿದ್ದಾರೆ. ಇತ್ತಂಡದವರೂ ನಿಜವಾದ ಕಾಂಗ್ರೆಸ್ ಕಾರ್ಯವನ್ನು ಕಡೆಗಣಿಸಿ ದ್ವೇಷಸಾಧನೆಯ ಕೆಲಸದಲ್ಲಿ ನಿರತರಾಗಿದ್ದಾರೆ. ಇವೆಲ್ಲವುಗಳ ಪರಿಣಾಮವಾಗಿ ಸದ್ಯದಲ್ಲಿಯೇ ಅವಿಶ್ವಾಸವನ್ನು ಸೂಚಿಸುವ ಠರಾವೊಂದು ಬರಲಿದೆಯೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಈ ಠರಾವಿನ ನೋಟೀಸನ್ನು ಕೆಲವೊಂದು ಕಾರಣಗಳಿಂದ ಜಿಲ್ಲಾ ಕಮಿಟಿಯ ಅಧ್ಯಕ್ಷರು ಹಿಂದೆ ಕೊಟ್ಟಿದ್ದಾರೆಂದೂ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಸಭೆಯನ್ನು ಕೂಡಲೆ ಕರೆಯಬೇಕೆಂದು ಅಧ್ಯಕ್ಷರಿಗೆ ತಂತಿ ಕೊಟ್ಟಿದ್ದಾರೆಂದೂ ತಿಳಿದು ಬರುತ್ತದೆ. ಈ ಗೊಂದಲದ ಜವಾಬ್ದಾರಿಯು ಇತ್ತಂಡದವರ ಮೇಲೂ ಇದೆಯೆಂಬುದರಲ್ಲಿ ಸಂದೇಹವಿಲ್ಲ. ಅಧಿಕಾರದಲ್ಲಿರುವವರಿಗೆ ತಮ್ಮ ಅಧಿಕಾರವನ್ನು ಬಿಟ್ಟುಕೊಡಲು ಎಳ್ಳಷ್ಟೂ ಮನಸ್ಸಿಲ್ಲ. ಇದು ಜಿಲ್ಲಾ ಕಮಿಟಿಯ ಅಧ್ಯಕ್ಷರ ಹೇಳಿಕೆಯಿಂದಲೇ ಸ್ಪಷ್ಟವಾಗುತ್ತದೆ. ವಿರೋಧ ಪಕ್ಷದವರೂ ಅಧಿಕಾರಕ್ಕಾಗಿಯೇ ಪೇಚಾಡುವಂತೆ ಕಾಣುತ್ತದೆ. ಈ ತಿಕ್ಕಾಟಕ್ಕೆ ಈ ಎರಡು ತಂಡಗಳೊಳಗಿನ ದ್ವೇಷಾಸೂಯೆಗಳೇ ಕಾರಣವಲ್ಲದೆ ಯಾವ ತಾತ್ವಿಕ ಭಿನ್ನಾಭಿಪ್ರಾಯಗಳೂ ಇಲ್ಲವೆಂಬುದು ಹಗಲಿನಂತೆ ಸ್ಪಷ್ಟ. ಕಾಂಗ್ರೆಸಿನ ವಿಧಾಯಕ ಕಾರ್ಯಕ್ರಮದ ಅಭಿರುಚಿಯಿಂದಾಗಿ ಇತ್ತೀಚೆಗೆ ಸೇರಿದ ಕಾಂಗ್ರೆಸ್ ಜನರೊಳಗೆಯೇ ಮಾತ್ರ ಈ ಗೊಂದಲಗಳು ನಡೆಯುತ್ತಿದ್ದರೆ ಅದೊಂದು ದಿಗಿಲಿನ ವಿಚಾರವಾಗುತ್ತಿದ್ದಿಲ್ಲ. ಆದರೆ ವಿಷಾದಾಸ್ಪದ ಸಂಗತಿಯೆಂದರೆ ಹಳೆಯ ಕಾಂಗ್ರೆಸ್ ಕೆಲಸಗಾರರು ಕೂಡಾ ಈ ಅವ್ಯವಸ್ಥೆಯಲ್ಲಿ ಭಾಗವಹಿಸತೊಡಗಿದ್ದಾರೆಂಬುದು.

ಈಗ ಅಧಿಕಾರದಲ್ಲಿರುವ ವರ್ಗವು ಪಾರ್ಲಿಮೆಂಟರೀ ಚಟುವಟಿಕೆಗಳಲ್ಲಿ ಅಭಿರುಚಿಯುಳ್ಳದ್ದು. ಕಾಂಗ್ರೆಸಿನ ಸದ್ಯದ ಮುಖ್ಯ ಕಾರ್ಯಕ್ರಮವಾದ ಈ ಭಾಗದಲ್ಲಿ ಯೋಗ್ಯ ರೀತಿಯಲ್ಲಿ ಕೆಲಸ ಮಾಡಲು ಅದಕ್ಕೆ ಇಚ್ಛೆಯಿದೆ. ಈಗಿನ ಅಧಿಕಾರೀ ವರ್ಗದ ಅಕ್ಷಮ್ಯವಾದ ಕೆಲವು ಅಪರಾಧಗಳನ್ನು ನಾವು ತೀಕ್ಷ್ಣವಾಗಿ ಖಂಡಿಸುವುದಿದ್ದರೂ ಪಾರ್ಲಿಮೆಂಟರೀ ಕಾರ್ಯಕ್ರಮದ ಮಟ್ಟಿಗೆ ಅವರಲ್ಲಿ ಸಾಕಷ್ಟು ಯೋಗ್ಯತೆಯಿದೆಯೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ವಸ್ತುಸ್ಥಿತಿಯು ಹೀಗಿರುವಾಗ ನಿಜವಾದ ಕಾಂಗ್ರೆಸ್ ಶ್ರೇಯಃಕಾಂಕ್ಷಿಗಳು ಉತ್ಸಾಹಿಗಳಾದ ಅವರಿಗೆ ತಮ್ಮದೇ ರೀತಿಯಲ್ಲಿ ಕೆಲಸ ಮಾಡಿಕೊಂಡು ಹೋಗಲು ಸಂದರ್ಭವನ್ನೊದಗಿಸಿ ಕೊಡುವುದು ಯೋಗ್ಯವಾಗಿದೆ.

ಇವರೊಳಗೆ ನಿಜವಾದ ತಾತ್ವಿಕ ಅಭಿಪ್ರಾಯ ಭೇದಗಳಿರುವುದಿದ್ದರೆ ಅಂಥವರು ಕಾಂಗ್ರೆಸಿನ ಅಭಿವೃದ್ಧಿಯ ದೃಷ್ಟಿಯಿಂದ ತಮ್ಮ ಕಾರ್ಯವನ್ನು ತಮ್ಮ ವಿಶ್ವಾಸವಿರುವ ರೀತಿಯಲ್ಲಿ ನಡೆಸಿಕೊಂಡು ಬರುವುದು ಮೇಲು. ಬದಲಾಗಿ ಪರಸ್ಪರ ಕೆಸರೆರಚುವ ಹವ್ಯಾಸಕ್ಕೆ ಹೋದರೆ ಸಾಮಾನ್ಯ ಜನರಿಗೆ ಕಾಂಗ್ರೆಸಿನ ಮೇಲಿರುವ ಗೌರವವು ಕಡಿಮೆಯಾಗುತ್ತದೆ. ಆದರಿಂದ ಅವಿಶ್ವಾಸ ಠರಾವಿನ ಮೇಲೆ ಅವಿಶ್ವಾಸ ಠರಾವನ್ನು ತಂದು ತಪ್ಪುಗಳುಳ್ಳವರಾಗಿದ್ದರೂ ಉತ್ಸಾಹಿಗಳಾದ ಅವರ ಉತ್ಸಾಹಕ್ಕೆ ಭಂಗ ತರುವುದು ಅಯೋಗ್ಯವೆಂಬುದೇ ನಮ್ಮ ಅಭಿಪ್ರಾಯ. ಇದಕ್ಕೂ ಇಷ್ಟವಿಲ್ಲದಿದ್ದರೆ ಇನ್ನು ಒಂದೆರಡೇ ತಿಂಗಳಲ್ಲಿ ಹೊಸ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಚುನಾವಣೆಯಾಗುವಾಗ ಅಧಿಕಾರವನ್ನು ಜನತೆಯ ಬೆಂಬಲದಿಂದ ಪಡೆಯುವ ಪ್ರಯತ್ನವನ್ನು ಮಾಡುವುದು ವಿಹಿತವಾಗಿದೆ.

ಈ ಸಂದರ್ಭದಲ್ಲಿ ಹಳೆಯ ಕಾಂಗ್ರೆಸ್ ಕೆಲಸಗಾರರಲ್ಲಿ ನಮ್ಮದೊಂದು ವಿನಂತಿಯಿದೆ. ಪಾರ್ಲಿಮೆಂಟರೀ ಚಟುವಟಿಕೆಗಳಲ್ಲದೆ ಕಾಂಗ್ರೆಸಿನಲ್ಲಿ ನಡೆಸಬೇಕಾದ ಕಾರ್ಯಕ್ರಮಗಳು ಇನ್ನೂ ಅನೇಕವಿವೆ. ಹರಿಜನೋದ್ಧಾರ, ಖಾದಿ ಪ್ರಚಾರ, ಮದ್ಯಪಾನ ನಿಷೇಧ, ಇವೇ ಮೊದಲಾದ ಪ್ರಾಮುಖ್ಯ ಕೆಲಸಗಳು ಜಿಲ್ಲೆಯಲ್ಲಿ ಬಹಳ ಹಿಂದುಳಿದಿವೆ. ಈ ರಚನಾತ್ಮಕ ಕಾರ್ಯಕ್ರಮಗಳಲ್ಲಿ ನಿಮಗೆ ಸಾಕಷ್ಟು ಅನುಭವವೂ ವಿಶ್ವಾ

(೩ನೆ ಪುಟ ನೋಡಿರಿ.)

# ಸಾರ್ವಜನಿಕ ಮುಂದಿ

ಪಾಶ್ಚಾತ್ಯ ನಾಗರಿಕತೆಯ ಪರಿಣಾಮದಿಂದಾಗಿ ಐರೋಪ್ಯ ಜನಜೀವನವು ಹೆಚ್ಚಿನ ಮಟ್ಟಿಗೆ ಅನೀತಿಗೊಳಗಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಪ್ಯಾರಿಸ್ ನಗರದ ವಿವಿಧ ಹೊಟೆಲುಗಳಲ್ಲಿ ಕಾಣಬಹುದಾದ ದೃಶ್ಯಗಳೇ ಇವುಗಳಿಗೆ ಸಾಕ್ಷಿಯಾಗಿವೆ. ಸಾಯಂಕಾಲದ ಹೊತ್ತಿನಲ್ಲಿ ಹೆಚ್ಚಿನವರು

### ಪ್ಯಾರಿಸಿನ ಪಾಪಕೂಪಗಳು

ಪ್ಯಾರಿಸಿನ ಹೊಟೆಲುಗಳ ಎದುರಿನಲ್ಲಿರುವ ಹೂತೋಟಗಳಲ್ಲಿ ಚಹಾಪಾನ ಮಾಡುತ್ತಿರುತ್ತಾರೆ. ಯಾರಾದರೂ ಸರಿಯೆ, ಒಂದಿನಿತು ಪಾನೀಯವನ್ನು ತೆಗೆದುಕೊಂಡರೆ ಅವನು ಎಷ್ಟು ಸಮಯದ ತನಕವೂ ಅಲ್ಲಿ ಕುಳಿತುಕೊಳ್ಳಬಹುದು. ವಿದ್ಯಾರ್ಥಿಗಳು, ಕಲಾವಿದರು, ಪತ್ರಿಕೋದ್ಯಮಿಗಳೇ ಮೊದಲಾದವರು ತಮ್ಮ ಸಂಜೆಗಳನ್ನು ಈ ಹೊಟೆಲುಗಳೆದುರು ಕಳೆಯುತ್ತಾರೆ. ಇಂತಹ ಸ್ಥಳಗಳಲ್ಲಿ ಪತ್ರಿಕೋದ್ಯಮಿಗಳಿಗೆ ಪರಊರುಗಳ ನೂರಾರು ಮಂದಿಯ ಭೇಟಿಯಾಗುತ್ತದೆ. ಹೊಟೆಲುಗಳ ಸುಂದರಿಯರಾದ ತರುಣಿಯರು ವಿವಿಧ ಪಾನೀಯಗಳನ್ನು ತಂದಿಡುವಾಗ ಅವರೊಡನೆ ಎಷ್ಟೋ ಮಂದಿ ವಿನೋದವಾಡುತ್ತಾರೆ. ಲಜ್ಜೆಯಿಲ್ಲದೆ ತರುಣಿಯರು ಪುರುಷರೊಡನೆ ಕುಳಿತುಕೊಂಡು ಮುದ್ದಿಡುವುದು ಹೊಸಬರಿಗೆ ವಿಚಿತ್ರವಾಗಿ ಕಾಣಬಹುದು. ಪಾಶ್ಚಾತ್ಯರಿಗೆ ಮುದ್ದಿಡುವುದು ಸಾಮಾನ್ಯವಾಗಿ ನಮಸ್ಕರಿಸಿದಂತೆ. ಹೊಟೆಲುಗಳ ಹೊರಭಾಗದಲ್ಲಿ ನಿಂತು ದಾರಿಹೋಕರನ್ನು ಆಕರ್ಷಿಸುವ ತರುಣಿಯರನ್ನು ಕಾಣುವುದಕ್ಕಾಗಿ ಹೊಟೆಲುಗಳಿಗೆ ಹೆಚ್ಚಿನವರು ಹೋಗುತ್ತಾರೆ.

ಈ ಬಾರಿ ನಾನು ಪ್ಯಾರಿಸಿನ ಹೊಟೆಲಿನಲ್ಲಿ ಕಂಡ ಚಿಕ್ಕದೊಂದು ವಿಷಯವನ್ನು ಉದಾಹರಿಸಿ ವ್ಯಭಿಚಾರವು ಪ್ಯಾರಿಸಿನಲ್ಲಿ ಎಷ್ಟು ಸಾರ್ವಜನಿಕವಾಗಿ ನಡೆಯುತ್ತದೆಂಬುದನ್ನು ಮಾತ್ರ ಹೇಳುತ್ತೇನೆ. ನಾನು ಸಾಯಂಕಾಲ ಕಲಾನ್ವೈಭವದಿಂದ ಕೂಡಿದ "ಮೋನಾ ಲಿಸಾ"ವನ್ನು ನೋಡಲಿಕ್ಕಾಗಿ ಹೋಗಿದ್ದೆ. ಹೋಗುತ್ತಿದ್ದಾಗ ಒಂದು ಹೊಟೆಲಿನೆದುರು ಗೆಳೆಯರೊಬ್ಬರು ನನ್ನನ್ನು ಕರೆದರು. ಹೋಗಿ ಕುಳಿತೊಡನೆಯೇ "ಚಂಪೇನ್"ವೈನನ್ನು ತರಿಸಿದರು. ಪ್ಯಾರಿಸಿನಲ್ಲಿ ಒಂದು ವಿಶೇಷವೆಂದರೆ ಬೀಯರ್, ವೈನುಗಳಿಗಿಂತ ನೀರಿಗೆ ಹೆಚ್ಚು ಬೆಲೆಯಿರುವುದು! ಒಂದೆರಡು ನಿಮಿಷಗಳಲ್ಲಿಯೇ ಇಬ್ಬರು ತರುಣಿಯರು ಹೊಟೆಲಿನೊಳಗಿಂದ ಹೂವಿನ ಗೊಂಚಲನ್ನು ಹಿಡಿದುಕೊಂಡು ಹೊರಬಂದರು. ಫ್ಯಾಶನಿನಲ್ಲಿ ಪ್ಯಾರಿಸೇನೂ ಕಡಿಮೆಯದಲ್ಲ. ಪ್ರಾಯಶಃ ಅವರು ಅಲ್ಲಿಯ ನರ್ತಕಿಯರಾಗಿರಬಹುದೆಂದು ನಾನು ಭಾವಿಸಿದೆ. ತೆಳ್ಳಗಾದ ಉಡುಪು. ವಸನವಿಲ್ಲದ ಅರೆಬತ್ತಲೆ ಎದೆ. ನೂರಾರು ಗುಂಗುರುಗಳುಳ್ಳ ಕೇಶರಾಶಿ. ಚುಟುಕಾಗಿ ಹೇಳುವುದಿದ್ದರೆ ಅವರು ಸುಂದರಿಯರಾಗಿದ್ದರು. ಕೂಡಲೆ ನಡುಹರೆಯದೊಬ್ಬ ವ್ಯಕ್ತಿಯು ನನ್ನ ಗೆಳೆಯರಿಗೆ ಹಸುರು ಬಣ್ಣದ ಎರಡು ಕಾಗದದ ತುಂಡನ್ನು ಕೊಟ್ಟರು. ಅದೇನಿರಬಹುದೆಂದು



ಕುತೂಹಲದಿಂದ ನಾನು ನೋಡುತ್ತಿದ್ದಂತೆಯೇ ನನ್ನ ಗೆಳೆಯರು ಜೇಬಿನಿಂದ ಕೆಲವು ನಾಣ್ಯಗಳನ್ನು ತೆಗೆದುಕೊಟ್ಟರು. "ಬನ್ನಿ, ನೃತ್ಯ

## "ಕೊಕೇನ್" ಅ

ಕೂಟಕ್ಕೆ ಹೋಗೋಣ"ವೆಂದರವರು. ನನಗೆ ಸಂಶಯ ಹುಟ್ಟಿತು. ಆದರೆ ಅವರು ನನ್ನ ಚಿಕ್ಕಂದಿನ ಗೆಳೆಯರಾದುದರಿಂದ ಹೋದೆ. ಇಬ್ಬರು ತರುಣಿಯರೂ ನಮ್ಮೊಡನೆ ಬಂದರು. ಸುಂದರವಾದೊಂದು ಕೋಣೆಯೊಳಗೆ ನಾವು ಪ್ರವೇಶಿಸಿದೆವು. "Shall we dance?" ನನ್ನೊಡನೆ ಆ ಸುಂದರಿ ಕೇಳಿದಳು. ಅರೆನಿಮಿಷದಲ್ಲಿ ಸುಮಾರು ಐವತ್ತು ಜೊತೆ ಸ್ತ್ರೀ ಪುರುಷರು ಡಾನ್ಸ್ ಮಾಡುತ್ತಿದ್ದರು. ನನ್ನೊಡನೆ ಕುಣಿ

# ...ಲ್ಲಿ ನೀತಿಯ ಪತನ!



ವಿಶಾಲವಾದ ಭವನದಲ್ಲಿ ಕುಣಿಯುತ್ತಿದ್ದವರು ಮಾಡುತ್ತಿದ್ದ ಕಾಮವಿಕಾರಗಳನ್ನು ನೋಡಿದಾಗಲೇ ಅವರು ಮತ್ತರಾಗಿದ್ದರೆಂದು ಸ್ಪಷ್ಟ

## ...ರ್ಥದ ಪ್ರಭಾವ

ವಾಗುತ್ತಿತ್ತು. ಕೆಲವು ತರುಣಿಯರು ತಮ್ಮ ದೇಹಸ್ವಾಸ್ಥ್ಯವನ್ನೇ ಮರೆತು ತೀರಾ ನಗ್ನರಾಗಿದ್ದರು. ಕೆಲವು ಮುದುಕರ ಅವಸ್ಥೆಯು ಅವರ್ಣನೀಯವಾಗಿತ್ತು. ನನ್ನೊಡನಿದ್ದ ಹುಡುಗಿಯು ಪ್ರಾಯಶಃ ಕೊಕೇನ್ನು ತೆಗೆದುಕೊಂಡಿರಬೇಕು. ಪುನಃ ಬಂದೊಡನೆಯೇ ಆಕೆಯ ವಿಚಿತ್ರ ರೀತಿಯನ್ನು ಕಂಡು ನನಗೆ ಆಶ್ಚರ್ಯವಾಯಿತು. ಆಕೆಯ ಹುರುಪು ಇಮ್ಮಡಿ ಮುಮ್ಮಡಿಯಾಗಿತ್ತು. ಆದರ ಅಮಲಿನ ಬಲದಿಂದ ಆಕೆ ನನ್ನನ್ನು ಸಮೀಪದಲ್ಲಿದ್ದ ಸೋಫಕ್ಕೆ ದೂಡಿಬಿಟ್ಟಳು. ಅವಳ ತೋಳುಗಳ ಆಲಿಂಗನವು ನನ್ನನ್ನು ಹಗ್ಗದಿಂದ ಬಿಗಿದಂತೆ ಮಾಡಿತು. ಆ ಕಾಲದಲ್ಲಿ ನನಗೂ ಅಮಲೇರಿರಬೇಕು. ಮತ್ತರಾಗಿದ್ದ ನಾವಿಬ್ಬರೂ ಮತ್ತೇನ ಮಾಡಿರಬಹುದೆಂದು ನನಗೆ ತಿಳಿಯದು. ಮರುದಿನ ಬೆಳಿಗ್ಗೆ ನನ್ನ ಅವಸ್ಥೆಯು ಶೋಚನೀಯವಾಗಿತ್ತು.

ನನ್ನ ಗೆಳೆಯರೊಡನೆ ಪ್ಯಾರಿಸಿನ ಈ ಗುಪ್ತ ಜೀವನದ ಕುರಿತ. ನಾನು ಮಾಹಿತಿಯನ್ನು ಕೇಳಿದೆ. ಪ್ರಾಯಶಃ ಅವರಿಗೆ ಅಲ್ಲಿಯ ರಹಸ್ಯಗಳು ಪೂರ್ಣವಾಗಿ ತಿಳಿದಿರಬೇಕು. ಹೇಳಿದರವರು: "ಪ್ಯಾರಿಸ್ ಜಗತ್ತಿನ ಭೋಗನಗರ. ಇಲ್ಲಿಗೆ ಜಗತ್ತಿನ ವಿವಿಧ ಭಾಗಗಳಿಂದ ಭೋಗಾಭಿಲಾಷಿಗಳು ಬರುತ್ತಾರೆ. ದೇಹವಿಕ್ರಯವು ಇಲ್ಲಿಯಷ್ಟು ಹೆಚ್ಚು ಮತ್ತೆಲ್ಲಿಯೂ ನಡೆಯುವುದಿಲ್ಲ. ಯಾವ ದೇಶದ ಹುಡುಗಿಯರಾದರೂ ಇಲ್ಲಿ ದೊರಕುತ್ತಾರೆ. ಭಾರತದ ಎಷ್ಟೋ ನರೇಂದ್ರರು ಇಲ್ಲಿಗೆ ಬಂದು ಸೀನ್ ನದಿಯ ತೀರದಲ್ಲಿ ಬೇಕಾದ ಸುಖವನ್ನು ಪಡೆಯುತ್ತಿರುತ್ತಾರೆ. ಇತ್ತೀಚೆಗೆ ........ ಸಂಸ್ಥಾನದ ರಾಜರು ಪ್ಯಾರಿಸಿಗೆ ಬಂದಿದ್ದರು. ಕೆಲವೇ ದಿನಗಳಿಗಾಗಿ ಅವರು ಹತ್ತು ಸಾವಿರ ಫ್ರಾಂಕುಗಳನ್ನು ಖರ್ಚುಮಾಡಿರುವುದು ನನಗರಿತಿದೆ. ರಾಜಮನೆತನದ ಸ್ತ್ರೀಯರು ಕೂಡಾ ಇಲ್ಲಿಗೆ ಅದಕ್ಕಾಗಿಯೇ ಬರುವುದುಂಟು."

ಇದನ್ನು ಕೇಳಿ ನನಗೆ ಆಶ್ಚರ್ಯವೆನಿಸಿತು. ಯುರೋಪಿಗೆ ಆರೋಗ್ಯ ಲಾಭಕ್ಕಾಗಿ ಹೋಗುವವರ ರಹಸ್ಯವು ಇದೇ ಎಂಬುದು ನನಗಾಗ ತಿಳಿಯಿತು. "ಆದರೆ ಇಷ್ಟು ಮಂದಿಗೆ ಬೇಕಾದ ಸ್ತ್ರೀಯರನ್ನು ಎಲ್ಲಿಂದ ತರುತ್ತಾರೆ". ಎಂದು ನಾನು ಕುತೂಹಲದಿಂದ ಕೇಳಿದೆ. ಸಿಗರೇಟಿನ ಹೊಗೆಯನ್ನು ಚಕ್ರಾಕಾರವಾಗಿ ಹೊರಗೆ ಬಿಡುತ್ತಾ ಹೇಳಿದರವರು: "ನಿಮಗೀ ರಹಸ್ಯವು ತಿಳಿದಿಲ್ಲ ಜಗತ್ತಿನ ವಿವಿಧ ಭಾಗಗಳಿಂದ ಸ್ತ್ರೀಯರನ್ನು ಸಂಗ್ರಹಿಸಿ ಮಾರುವ ಎಷ್ಟೋ ಗುಪ್ತ ಸಂಸ್ಥೆಗಳಿವೆ. ಬೋರ್ನಿಯೋ ಮೊದಲಾದ ಕೆಲವು ದ್ವೀಪಗಳ ತರುಣಿಯರು ಸುಂದರಿಯರಾಗಿರುವುದರಿಂದ ಅಲ್ಲಿರುವ ಸ್ತ್ರೀಯರನ್ನು ಪ್ಯಾರಿಸಿನ ಹೊಟೆಲ್ ಮ್ಯಾನೇಜರು ಕೊಂಡುಕೊಳ್ಳುತ್ತಾರೆ.

ಪ್ಯಾರಿಸಿನ ಹೊಟೆಲುಗಳೆಂದರೆ ವ್ಯಭಿಚಾರದ ತವರುಮನೆಗಳು!

ಲೇಖಾಂಕ ೩
ಬರೆದವರು: 'ಕೌಶಿಕ'.

---

(೩೨ನೆ ಪುಟದಿಂದ)

ನಾಳೆಯ ಯೋಚನೆಯನ್ನು ಮರೆತು ಜಗತ್ತಿನ ಎಲ್ಲಾ ಸುಖಗಳನ್ನು ಅನುಭವಿಸಿದ ಕವಿಯಿವನು. ಮಹಾಯುದ್ಧದಲ್ಲಿ ಫ್ಯೂಮನ್ನು ಇಟಲಿಗೆ ಸಂಪಾದಿಸಿ ಕೊಟ್ಟು ತನ್ನ ಒಂದು ಕಣ್ಣನ್ನು ಕಳೆದುಕೊಂಡಿದ್ದನು. ಇವನ ಕೊನೆಯ ಮನೆಯ ಹೆಸರು 'ವಿಟ್ಟೋರಿಯಾಲಾ' ಕೊನೆಯವರೆಗೂ ಭೋಗದಲ್ಲಿ ಒಲಾಡುತ್ತಿದ್ದ ಇವನಲ್ಲಿ ಮುಸ್ಸೋಲಿನಿಗೆ ತುಂಬಾ ಪ್ರೀತಿ. ೧೯೩೮ ನೇ ಮಾರ್ಚ್ ತಿಂಗಳಲ್ಲಿ ಇವನು ತೀರಿಕೊಂಡನು. ಇವನ ಗೋರಿಯ ಮೇಲೆ ಸ್ವರ್ಣಾಕ್ಷರಗಳಿಂದ ಅವನೇ ಬರೆದ ಮರಣ ಶಾಸನವು ಬರೆಯಲಾಗಿದೆ.

---

# ಭಗದತ್ತನ ಬಹಿರಂಗ ಪತ್ರಗಳು

ವಿದುರಾಶ್ವತ್ಥದ ವಿದುರ ನಾರಾಯಣ ಸ್ವಾಮಿಗೆ,

ದೇವಾ,

ಮೈಸೂರು ಸರಕಾರವು ನಲವತ್ತು ಸಹಸ್ರ ರೂಪಾಯಿಗಳನ್ನು ವ್ಯಯಮಾಡಿ ದೊಡ್ಡದೊಂದು ವರದಿಯನ್ನು ತಯಾರಿಸಿತಷ್ಟೆ! ಇದರಲ್ಲಿ ಎಷ್ಟು ಸತ್ಯ ಎಷ್ಟು ಸುಳ್ಳೆಂಬುದು ನಿನಗರಿತಿದೆಯೆ? ನಿನ್ನ ಜಾಗ್ರತೆಗಾಗಿ ಬಂದ ಜನರಲ್ಲಿ ಕೆಲವರು ಗುಂಡಿನೇಟಿಗೆ ಸಿಲುಕಿ ಪರಂಧಾಮವನ್ನೈದಿದ್ದರೂ ನೀನು ಸುಮ್ಮನಾದುದನ್ನು ಕಂಡು ನನಗೆ ಅದೇಕೋ ವ್ಯಸನವಾಗಿದೆ. ಪರಲೋಕಕ್ಕೆ ಹೋದವರ ಸಂಬಂಧಿಕರಿಗೆ ಸರಕಾರವು ಏನನ್ನಾದರೂ ಕೊಡುವಂತೆ ನೀನೇಕೆ ನಿನ್ನ ದೈವಿಕ ಉಪದೇಶವನ್ನೀಯುವುದಿಲ್ಲ? ಮೈಸೂರಿನ ಪ್ರಜೆಗಳಿಗೆ ಜವಾಬ್ದಾರೀ ಸರಕಾರವನ್ನು ಕೊಡಿಸಲಿಕ್ಕೆ ನಿನ್ನ ಕಾರಣೀಕವು ಸಾಲದೆ? ಎಲ್ಲೆಲ್ಲಿಯೂ ಜಾಗ್ರತಿಯುಂಟಾಗಿರುವಾಗ ದೇವರು ಮಲಗಿ ಸುಖಿಸುವುದು ಅನ್ಯಾಯವಾದುದರಿಂದ ಕಣ್ದೆರೆದು ನೋಡಬೇಕಾಗಿ ಪ್ರಾರ್ಥಿಸುವ

—ನಿನ್ನ ಭಕ್ತ ಭಗದತ್ತ.

---

ಮದ್ರಾಸಿನ ಹಿಂದುಸ್ಥಾನಿ ವಿರೋಧಿಗಳಿಗೆ,

ಚಳವಳಗಾರರೆ,

ನಿಮ್ಮ ಚಳವಳದ ಇತ್ತೀಚೆಗಿನ ರೂಪವನ್ನು ಕಂಡು ನನಗೆ ಬಹಳ ವಿಸ್ಮಯವಾಗಿದೆ. ತಮಿಳು ಸಾಹಿತ್ಯವನ್ನುಳಿಸಬೇಕಾದರೆ ಪತ್ರಿಕಾ ಕಛೇರಿಗಳಿಗೆ ಕಲ್ಲೆಸೆಯಬೇಕೆಂಬ ನಿಮ್ಮ ಮಾದರಿ ಚಳವಳವನ್ನು ಜಗತ್ತು 'ಪ್ರಶಂಸಿಸ'ದೆ ಬಿಟ್ಟೀತೆ? ಹೇಗಿದ್ದರೂ ನಿಮ್ಮಲ್ಲಿ ಯಾರಿಗಾದರೂ ಸಹಾನುಭೂತಿಯಿದ್ದಿದ್ದರೆ ಅದನ್ನು ಕಳೆದುಕೊಂಡಿರುವುದಕ್ಕಾಗಿ ನಿಮಗೆ ಅಭಿವಂದನೆಗಳು.

—ಹಿಂದೀಪ್ರಿಯ ಭಗದತ್ತ.

---

ಹೈದರಾಬಾದ್ ಸಂಸ್ಥಾನದ ಅಧಿಕಾರಿಗಳಿಗೆ.

ಭೂಪತಿಗಳೆ,

ನಿಮ್ಮ ಸಂಸ್ಥಾನದಲ್ಲಿ ನಡೆಯುತ್ತಿರುವ ಕಾಂಗ್ರೆಸ್ ಚಳವಳವನ್ನು ನೀವು ವಿರೋಧಿಸುವುದನ್ನು ಕಂಡು ನಿಮಗೆ ಈಗಾಗಲೆ ಅನೇಕ ಸಾಮ್ರಾಜ್ಯಶಾಹೀ ಬ್ರಿಟಿಷರು ಅಭಿವಂದಿಸಿರಬಹುದು. ಉಪ್ಪಿನಕಾಯಿಯಲ್ಲಿರುವ ಹುಳುವಿಗೆ ಮೆಣಸಿನ ಖಾರ ಅರಿಯದಂತೆ ಬ್ರಿಟಿಷ್ ಸಾಮ್ರಾಜ್ಯದ ದಾಸ್ಯ ಛತ್ರದಡಿಯ ನೆರಳಲ್ಲಿರುವ ನಿಮಗೆ ಕಾಂಗ್ರೆಸ್ ಜನರ ಸ್ವಾತಂತ್ರ್ಯ ಚಳವಳದ ಆವಶ್ಯಕತೆಯು ಅರಿಯದಿರುವುದು ಆಶ್ಚರ್ಯವಲ್ಲ. ಹೇಗಿದ್ದರೂ ಚಳವಳವನ್ನು ವಿರೋಧಿಸುವ ಮೂಲಕ ಅದನ್ನು ಬಲಪಡಿಸುತ್ತಿರುವುದಕ್ಕಾಗಿ ನಿಮ್ಮನ್ನು ಅಭಿವಂದಿಸುವ

—ನೊಗಲ್ ಶಾಹೀ ಭಗದತ್ತ

---

(೨೫ನೆ ಪುಟದಿಂದ)

ಸವೂ ಇವೆ. ಕಾಂಗ್ರೆಸ್ ಅಧಿಕಾರದಲ್ಲಿರುವವರು ಪಾರ್ಲಿಮೆಂಟರಿ ಕೆಲಸವನ್ನೂ, ನೀವು ಹೊರಗೆ ರಚನಾತ್ಮಕ ಕೆಲಸವನ್ನೂ ಮಾಡುತ್ತಾ ಬಂದರೆ ಜಿಲ್ಲೆಯಲ್ಲಿ ಕಾಂಗ್ರೆಸಿನ ವರ್ಚಸ್ಸು ಇನ್ನೂ ಹೆಚ್ಚುವ ಸಂಭವವಿದೆ.

ಸಮಗ್ರ ಭಾರತವು ಏಕಕಂಠದಿಂದ ನಿಷೇಧಿಸಿರುವ ಸಂಯುಕ್ತ ರಾಜ್ಯಘಟನೆಯು ನಮ್ಮ ಮೇಲೆ ತೂರಲ್ಪಡುತ್ತಿದೆ. ಅದನ್ನು ಮುರಿಯಲು ಕಾಂಗ್ರೆಸ್ ಸತ್ಯಾಗ್ರಹಕ್ಕಿಳಿದರೆ ಅದು ಆಶ್ಚರ್ಯದ ಸಂಗತಿಯಲ್ಲ. ಹೀಗಿರುವಾಗ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಕಾಂಗ್ರೆಸು ತನ್ನ ಬಲವನ್ನು ಎಂದಿಗಿಂತಲೂ ಹೆಚ್ಚಿಸಿಕೊಳ್ಳಬೇಕಾಗಿದೆ. ಆದುದರಿಂದ ನಮ್ಮ ಜಿಲ್ಲೆಯ ಕಾಂಗ್ರೆಸ್ ಬಾಂಧವರು ಶುಷ್ಕ ವಿಚಾರಗಳಿಗಾಗಿ ಅಂತಃಕಲಹಗಳನ್ನು ಹೆಚ್ಚಿಸಿಕೊಂಡು ಸಂಸ್ಥೆಯಲ್ಲಿ ಒಡಕನ್ನುಂಟುಮಾಡುವ ಕಾರ್ಯಕ್ಕೆ ಪ್ರೋತ್ಸಾಹವನ್ನು ಕೊಡಲಾರರೆಂದು ನಮ್ಮ ಭರವಸೆ-

—ಎಸ್. ಯು. ಪಣಿಯಾಡಿ.

# ಗೆಳೆಯರ ತಂಡ

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕ ಜ್ಞಾನವನ್ನು ಹೆಚ್ಚಿಸಿರಿ.

ಗೆಳೆಯರ ತಂಡಕ್ಕೆ ಬರೆಯುವಾಗ **"ಗೆಳೆಯರ ತಂಡ", C/o ಅಂತರಂಗ, ಉಡುಪಿ,** ಎಂದು ಬರೆಯಿರಿ.

ಪ್ರಿಯ ಗೆಳೆಯರೆ,

ಕರ್ನಾಟಕದ ವಿವಿಧ ಭಾಗಗಳಿಂದ ಪ್ರತಿದಿನವೂ ಹೊಸ ಹೊಸ ಸದಸ್ಯರು ತಂಡಕ್ಕೆ ಸೇರುತ್ತಿರುವರೆಂದು ತಿಳಿಸಲು ನನಗೆ ಸಂತೋಷವೆನಿಸುತ್ತದೆ. ಪ್ರಾಯದ ನಿಯಮವನ್ನು ತೆಗೆದುಹಾಕಿರುವುದು ಉತ್ತಮವಾಯಿತೆಂದು ಹಲವು ಸದಸ್ಯರು ನನಗೆ ಬರೆದು ಆ ಬದಲಾವಣೆಗೆ ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದ್ದಾರೆ.

ತಂಡದ ಸದಸ್ಯರ ಲೇಖನಗಳನ್ನು ಅಂತರಂಗದಲ್ಲಿ ಪ್ರಕಟಿಸುವ ಏರ್ಪಾಡು ಮಾಡಬೇಕೆಂದು ಅನೇಕರು ಸೂಚಿಸಿದ್ದಾರೆ. ಇದು ಉತ್ತಮ ಸೂಚನೆಯಾದುದರಿಂದ, ಸದಸ್ಯರಿಗೆ ಪ್ರೋತ್ಸಾಹವನ್ನೀಯುವುದಕ್ಕಾಗಿ ಉತ್ತಮವಾಗಿರುವ ಅವರ ಬರೆಹಗಳನ್ನು ಈ ಭಾಗದಲ್ಲಿ ಪ್ರಕಟಿಸುವ ಏರ್ಪಾಡು ಮಾಡಲಾಗುವುದು. ಲೇಖನಗಳನ್ನು ಕಳುಹಿಸುವವರು ತಮ್ಮ ಸದಸ್ಯತನದ ನಂಬರನ್ನು ಬರೆಯಲು ಮರೆಯಬಾರದು.

ತಂಡದ ಸದಸ್ಯರು ಉತ್ತಮವಾದ ವಿನೋದಗಳನ್ನು ಕಳುಹಿಸಿಕೊಟ್ಟರೆ ಅವುಗಳನ್ನು ಈ ವಿಭಾಗದಲ್ಲಿ ಪ್ರಕಟಿಸಲಾಗುವುದು. ಪ್ರತಿ ವಾರ ಉತ್ತಮವಾದ ವಿನೋದಗಳಿಗೆ ಚಿಕ್ಕ ಬಹುಮಾನಗಳನ್ನು ಕೊಡುವ ವ್ಯವಸ್ಥೆಯನ್ನು ಮಾಡಲಾಗುವುದು.

ತಂಡಕ್ಕೆ ಸದಸ್ಯರನ್ನು ಮಾಡಿಕೊಡುವರೆ ನಾನು ಬಿನ್ನವಿಸಿದಂತೆ ಹಲವು ಗೆಳೆಯರು ಸದಸ್ಯರನ್ನು ಮಾಡಿಕೊಡುವೆನೆಂದು ನನಗೆ ಬರೆದು ತಿಳಿಸಿದ್ದಾರೆ. ಇದಕ್ಕಾಗಿ ಅವರಿಗೆ ಅಭಿವಂದನೆಗಳು.

ಮೈಸೂರು ಸಂಸ್ಥಾನದ ಮಾಂಡ್ಯದಿಂದ ತಂಡಕ್ಕೆ ಸೇರಿದ ಹೊಸಸದಸ್ಯರೊಬ್ಬರ ಪತ್ರವನ್ನು ಇಲ್ಲಿ ಕೊಟ್ಟಿರುತ್ತೇನೆ. ತಂಡಕ್ಕೆ ಎಷ್ಟು ಉತ್ಸಾಹದಿಂದ ಸೇರುವರೆಂಬುದಕ್ಕೆ ಇದೊಂದು ನಿದರ್ಶನವಾಗಿದೆ: 'ಗೆಳೆಯ'

ಪ್ರಿಯ ಸಹೋದರರೇ!

ಅಂತರಂಗದ 5ನೇ ಸಂಚಿಕೆಯಲ್ಲಿ **"ಗೆಳೆಯರ ತಂಡ"**ವೆಂಬ ಪುಟವನ್ನು ನೋಡಿ, ಬೊಂಬಾಯಿಯ, "ಯಂಗ್ ಫೋಕ್ಸ್ ಲೀಗ್" ಅಲ್ಲದೆ ಕರ್ನಾಟಕದಲ್ಲಿಯೂ ಕೂಡ ಒಂದು "ಗೆಳೆಯರ ತಂಡ" ಏರ್ಪಾಡಾಗಿರುವುದನ್ನು ನೋಡಿ, ಆನಂದವೂ ಮತ್ತು ವಿಷಾದವೂ ಆಯಿತು. ಏಕೆಂದರೆ,:-

ನಾನು "ಗೆಳೆಯರ ತಂಡ"ದ ಸದಸ್ಯನಾಗಿ 2ನೇ ಸಂಚಿಕೆಯಲ್ಲಿ ಭಾಗವಹಿಸಬೇಕೆಂದು ಕುತೂಹಲನಾಗಿದ್ದೆ; ಆದರೆ ನನ್ನ ದುರದೃಷ್ಟದಿಂದ ಹಾಗಾಗಲಿಲ್ಲ. ಈ ಸಾರಿ ನಾನು "ತಂಡ"ದ ಸದಸ್ಯನಾಗಿ ಬಹಳ ಸಂತೋಷಪಡುತ್ತೇನೆ.

ನನ್ನ ಸಹೋದರರ, ಎಲ್ಲಾ ಒಳ್ಳೆಯ ಧ್ಯೇಯಗಳೂ ಸಂಪೂರ್ಣ ಫಲಕಾರಿಯಾಗಬೇಕಾದರೆ, ಆದಷ್ಟು ಬೇಗನೆ "ಗೆಳೆಯರ ತಂಡ"ದ ಸದಸ್ಯರಾಗುವುದು ಭಾವೀಜನಾಂಗದ ಏಳಿಗೆಗೆ ಕಾರಣವೆನ್ನಲು ಸಂದೇಹವಿಲ್ಲ.

ಯಂ ಆರ್. ಕೃಷ್ಣಮೂರ್ತಿ"
ಮಾಂಡ್ಯ.

**ತಂಡದ ಹೊಸ ಸದಸ್ಯರು.**

೧೧. ಶ್ರೀ. ಯಂ. ಆರ್. ಕೃಷ್ಣಮೂರ್ತಿ. ಮಾಂಡ್ಯ, ಮೈಸೂರು ಜಿಲ್ಲೆ.

ನಿಮ್ಮ ಸದಸ್ಯತನದ ನಂಬರು ೧೧.

# ಇಟಲಿಯ ಅತಿವ್ಯಯ ಶಿಖಾಮಣಿ

## ಕವಿ, ಪತ್ರಿಕೋದ್ಯಮಿ, ಗ್ರಂಥಕರ್ತ ಮತ್ತು ಫ್ಯಾಸಿಸ್ಟ್ ಯೋಧ ಗೇಬ್ರಿಲಾ ಅನೂಂರ್ಝೊ!

### ಅರೆಹುಚ್ಚು ವ್ಯಕ್ತಿಯ ವಿಚಿತ್ರ ಜೀವನ

ಐವತ್ತು ಪ್ರಸಿದ್ಧ ಗ್ರಂಥಗಳನ್ನು ಬರೆದು ಸಾಹಿತ್ಯ ಪ್ರಪಂಚದಲ್ಲಿ ಗಣನೀಯವಾದೊಂದು ಸ್ಥಾನವನ್ನು ಪಡೆದು, ಸಹಸ್ರಾರು ಸ್ತ್ರೀಯರೊಡನೆ ಸಂಭೋಗ ಸುಖವನ್ನನುಭವಿಸಿ, ಲಕ್ಷಗಟ್ಟಲೆ ಹಣವನ್ನು ಅಲಕ್ಷ್ಯಭಾವದಿಂದ ನೀರಿನಂತೆ ವ್ಯಯಿಸಿ, ಸಿಕ್ಕಾಬಟ್ಟೆ ಖರ್ಚುಮಾಡುವ ಮಹಾ ವ್ಯಕ್ತಿಯೆಂಬ ಹೆಸರನ್ನಾಂತ ಗೇಬ್ರಿಲ್ ಡಿ ಅನೂಂರ್ಝೊ ಎಂಬ ಇಟಾಲಿಯನ್ ವ್ಯಕ್ತಿಯು ಇತ್ತೀಚೆಗೆ ಕಾಲಾಧೀನನಾದನು.

### ಅತಿವ್ಯಯದ ಮಹಾ ಮೂರ್ತಿ.

ಗೇಬ್ರೀಲನು ಬಹುವ್ಯಯ ಮಾಡುವುದರಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾನೆ. ಸಾಮಾನ್ಯರು ಒಂದು ಅಂಗಡಿಗೆ ಹೋಗಿ ಒಂದು ಹೇಟನ್ನು ತೆಗೆದುಕೊಳ್ಳುವುದಿದ್ದರೆ ಇವನು ಐದಾರು ಡಜನುಗಳನ್ನು ತೆಗೆದುಕೊಳ್ಳುವ ಸ್ವಭಾವದವನು. ನೀವು ಅಂಗಡಿಯಲ್ಲಿ ಒಂದು ಸಾಮಾನನ್ನು ಕಂಡು ಇದರಿಂದ ಕಡಿಮೆ ಕ್ರಯದ್ದಿಲ್ಲವೆ" ಎಂದು ಕೇಳುವುದಿದ್ದರೆ ಅವನು "ಇದಕ್ಕಿಂತ ಹೆಚ್ಚುಕ್ರಯುದ್ದಿಲ್ಲವೆ?" ಎಂದು ಕೇಳುವನು. ಅವನು ತನ್ನಜೀವಮಾನದಲ್ಲಿ ಯಾವುದನ್ನಾದರೂ ಕೊಂಡುಕೊಳ್ಳದೆ ಅಂಗಡಿಗಳಿಂದ ಹಿಂದೆ ಬಂದದ್ದಿಲ್ಲ. "ಬರಿಕೈಯ್ಯಲ್ಲಿ ಹಿಂದೆ ಹೋಗುವಷ್ಟು ದೊಡ್ಡ ನಾಚಿಕೆಕರ ಕೆಲಸವು ಮತ್ತಾವುದೂ ಇಲ್ಲ"ವೆಂದವನ ಅಭಿಪ್ರಾಯ. "ಅಂಗಡಿಯಲ್ಲಿ ಒಳ್ಳೆ ಸಾಮಾನಿಲ್ಲದಿದ್ದರೆ ಅದು ಅಂಗಡಿಗಾರನ ತಪ್ಪಲ್ಲದೆ ಇತರರದಲ್ಲ"ವೆಂದವನ ವಿಮರ್ಶಾತ್ಮಕ ಅಭಿಮತ.



- ನೂರಾರು ಮನೆಗಳಲ್ಲಿ ವೈಭವದ ಜೀವನ.
- ನಿಮಿಷಕ್ಕೊಂದು ತಂತಿ ಬಿಡುವ ಹುಚ್ಚು.
- ಮುಸ್ಸೋಲಿನಿಯ ಪ್ರಶಂಸೆ.
- ವಚನವನ್ನು ಪಾಲಿಸುವದನ್ನುಮೆಚ್ಚದ ವ್ಯಕ್ತಿ
- ಆದರೂ ರಾಷ್ಟ್ರಕ್ಕಾಗಿ ಹೋರಾಡುವ ವೀರ.
- ಇಟಾಲಿಯಾನರ ರಾಷ್ಟ್ರೀಯ ಕವಿ.

### ನಿಮಿಷಕ್ಕೊಂದು ತೊಡಿಗೆ.

ಗೇಬ್ರೀಲನ ವೈಯಕ್ತಿಕ ವಿಚಾರವನ್ನು ಹೇಳಬೇಕಾಗಿಲ್ಲ. ಪ್ರತಿಯೊಂದರಲ್ಲಿಯೂ ಅತಿವ್ಯಯ. ಬೇರಾವ ಕೆಲಸವಿಲ್ಲದಿದ್ದರೆ ಕೆಲವೊಮ್ಮೆ ಅವನು ಹಲವಾರು ತಾಸುಗಳ ತನಕ ಎಡೆಬಿಡದೆ ಮೀಯುವುದುಂಟು. ರಾತ್ರಿಯಿಂದ ಹಗಲಿನ ತನಕ ತನ್ನ ಮೈಯ್ಯಮೇಲೆ ಪರಿಮಳ ದ್ರವ್ಯಗಳನ್ನು ಹಾಕಿಕೊಂಡು ಆನಂದಿಸುವುದು ಅವನ ಜೀವನದೊಂದು ವೈಶಿಷ್ಟ್ಯವಾಗಿತ್ತು. ಅವನ ೫೦ ಮಂದಿ ಸೇವಕರು ಹೊಸ ಬಟ್ಟೆಗಳನ್ನು ದಿನವೊಂದರ ನೂರಾರು ಬಾರಿ ತೊಡಿಸಿ ಬೇಸತ್ತಿದ್ದರು. ಅತಿವ್ಯಯದ ದೃಷ್ಟಿಯಲ್ಲಿ ಗೇಬ್ರೀಲನು ಅತಿಮಾನುಷನಾಗಿದ್ದನೆಂದು ಹೇಳಬಹುದು. ಇತರರಿಗೆ ಏನನ್ನಾದರೂ ಬಹುಮಾನವಾಗಿ ಕೊಡುವುದಿದ್ದರೆ ಅವನು ಅರ್ಧಮಿಲಿಯ ಲಯರ್‌ಗಳಿಗಿಂತ ಕಡಿಮೆಯ ವಜ್ರಗಳನ್ನು ಕೊಡುತ್ತಿದ್ದಿಲ್ಲ.

### ಕುದುರೆಗೆ ಮಲಗಲು ರತ್ನಗಂಬಳಿ.

ಇತ್ತೀಚೆಗೆ ಅವನ ಅತಿವ್ಯಯದ ಕುರಿತು ಪ್ಯಾರಿಸಿನ ಪತ್ರಿಕೆಯೊಂದು

ರಲ್ಲಿ ಒಂದು ಲೇಖನವು ಪ್ರಕಟವಾಗಿತ್ತು. ಅವನು "ಕೆಬೀರಿಯಾ" ಎಂಬೊಂದು ಸಿನೆಮಾ ಕಥೆಯನ್ನು ತನ್ನ ನೂರಾರು ನಾಯಿಗಳನ್ನು ಸಾಕುವುದಕ್ಕಾಗಿ ಬರೆದನಂತೆ ಜಗತ್ತಿನ ನಾಯಿಗಳಿಗೆ ಕೊಡುವ ಅತ್ಯುತ್ತಮ ತಿನಿಸನ್ನು ಗೆಬ್ರೀಲನು ಕೊಡುತ್ತಿದ್ದ. ಟಾಮ್ ಎಂಟಾಜಿನಿಯೆಂಬವರು ಅವನ ಕುರಿತು ಬರೆದ ಲೇಖನದಲ್ಲಿ—ಅನೂಂರ್ಝೂ ಅವನ ಪತ್ನಿ ಮತ್ತು ಕುದುರೆಯು ಬಹಳ ಬೆಲೆ ಬಾಳುವ ಪರ್ಸಿಯನ್ ರತ್ನಗಂಬಳಿಯ ಮೇಲೆ ಮಲಗಿಕೊಂಡಿದ್ದುದನ್ನು ಕಂಡು ಆಶ್ಚರ್ಯಪಟ್ಟಿದ್ದೇನೆ.—ಎಂದು ಬರೆದಿದ್ದಾರೆ.

**ನಾಟಕ ಶಾಲೆಯಲ್ಲಿ ಹೊಗೆ, ಬೆಂಕಿ!**

ಗೇಬ್ರೀಲ್ "ಫ್ರಾನ್ಸೆಸ್ಕಾ ಡೊರಾಮಿನಿ"ಯೆಂಬೊಂದು ಪ್ರಸಿದ್ಧ ನಾಟಕವನ್ನು ಬರೆದಿದ್ದ. ಅದರಲ್ಲಿ ಪ್ರಥಮ ಬಾರಿ ಅಭಿನಯಿಸಿದಾಗ ಒಂದು ಮುತ್ತಿಗೆಯ ದೃಶ್ಯವನ್ನು ರಂಗಭೂಮಿಯ ಮೇಲೆ ತೋರಿಸಲಿಕ್ಕಾಗಿ ಕೃತಕ ಕಟ್ಟಡದ ಮೇಲೆ ಗುಂಡೆಸೆದು ಅದನ್ನು ಭಸ್ಮೀಭೂತವನ್ನಾಗಿ ಮಾಡಿದಾಗ ಇಡೀ ನಾಟಕ ಗೃಹವು ಹೊಗೆಯಿಂದ ತುಂಬಿ ಹೋಯಿತು. ಹೊಗೆಯಿಂದಾಗಿ ಕಣ್ಣೀರನ್ನು ಸುರಿಸುತ್ತಿದ್ದ ಪ್ರೇಕ್ಷಕರು ಗೆಬ್ರೀಲನಿಗೆ ಸಿಕ್ಕಾಬಟ್ಟೆ ಬೈದುಕೊಂಡು ಹೊರನಡೆದರು, ಕಲ್ಲೆಸೆವ ಒಂದು ದೃಶ್ಯವನ್ನು ತೋರಿಸುವಾಗ ನಾಟಕ ಶಾಲೆಯ ಗೋಡೆಯು ಕುಸಿದು ಬಿತ್ತು. ಗೇಬ್ರೀಲ್ ಡಿ ಅನೂಂಝೊನ ಮನೋವೃತ್ತಿಯು ಮಾದರಿಯದು!

**ವಿಚಿತ್ರ ಪತ್ರವ್ಯವಹಾರ.**

ಗೇಬ್ರೀಲನ ಪತ್ರವ್ಯವಹಾರದ ಕ್ರಮವು ಮತ್ತಷ್ಟು ವಿಚಿತ್ರವಾಗಿದೆ. ಪ್ರತಿದಿನ ಆ ಮಹಾಶಯನಿಗೆ ಸುಮಾರು ೫೦ ಪತ್ರಗಳು, ೨೫ ತಂತಿಗಳು ಹತ್ತು ಹದಿನೈದು ಪುಸ್ತಕಗಳು ವಿಮರ್ಶೆಗಾಗಿ ಕಳುಹಿಸಲ್ಪಡುತ್ತಿದ್ದವು. ಅವನ ಜೀವಮಾನದಲ್ಲಿ ಒಟ್ಟಿಗೆ ಒಂದೂವರೆ ಕೋಟಿ ಪತ್ರಗಳು ಅವನ ಕೈಸೇರಿವೆಯೆಂದು ಅವನ ಕಾರ್ಯದರ್ಶಿಯವರು ಬರೆಯುತ್ತಾರೆ. ಆದರೆ ಗೇಬ್ರೀಲನಿಗೆ ಪತ್ರಗಳಿಗೆ ಉತ್ತರಕೊಡುವ ಹವ್ಯಾಸವೇ ಇದ್ದಿಲ್ಲ. ಅವನ ಕಾರ್ಯದರ್ಶಿಯು ಆ ಕುರಿತು ಹೀಗೆ ಬರೆಯುತ್ತಾನೆ:

ಕಾಗದಗಳು ಬಂದೊಡನೆಯೇ ಅವುಗಳನ್ನು ಸಿಕ್ಕಾಬಟ್ಟೆ ಚೆಲ್ಲಾಡಿ ಕೊನೆಗೆ "ಪತ್ರಗಳು" ಎಂಬೊಂದು ಪೆಟ್ಟಿಗೆಯಲ್ಲಿ ತುಂಬುವುದು ಒಂದು ಕ್ರಮ. ಅದರಲ್ಲಿ ಕಾಗದಗಳು ತುಂಬಿ ಹೊರಬರುವಂತಾದಾಗ, ಅವುಗಳನ್ನು ಒಂದು ಕೋಣೆಯಲ್ಲಿ ರಾಶಿ ಹಾಕಿಡುವುದು ಅವನ ಅಭ್ಯಾಸವಾಗಿತ್ತು. ಕೆಲವೊಮ್ಮೆ ನಾನು ಕುತೂಹಲಕ್ಕಾಗಿ ಆ ಪತ್ರಗಳಲ್ಲಿ ಕೆಲವನ್ನು ಓದಿನೋಡಿದ್ದೇನೆ. ಹೆಚ್ಚಿನವು ಹಣಕಾಸುಗಳಿಗೆ ಸಂಬಂಧಪಟ್ಟವುಗಳಾಗಿದ್ದುವು ಆದರೆ ಗೇಬ್ರೀಲರು ಪ್ರಣಯಿಗಳಿಂದ ಮತ್ತು ಸಂಪಾದಕರಿಂದ ಬರುವ ಪತ್ರಗಳನ್ನು ಹಾಗೆ ಕಡೆಗಣಿಸುತ್ತಿದ್ದಿಲ್ಲ. ತನಗೆ ಪ್ರಿಯವಾದ ವಿಚಾರಗಳಿಗೆ ಅನೂಂರ್ಝೂ ಬಹಳ ಲಕ್ಷ್ಯವೀಯುತ್ತಿದ್ದರು. ಯಾವ ಪತ್ರವು ಎಂಥ ವಿಚಾರವನ್ನೊಳಗೊಂಡಿದೆ ಯೆಂಬ ಅರಿವು ಅವರಿಗಿತ್ತು.

**ನಿಮಿಷಕ್ಕೊಂದು ತಂತಿ!**

ಸಾಮಾನ್ಯ ಪತ್ರವಾದರೂ ಅದನ್ನು ರಿಜಿಸ್ಟರ್ ಮಾಡಿ ಕಳುಹಿಸುವುದು ಗೇಬ್ರೀಲನ ಅಭ್ಯಾಸ. ಹಲವು ವರುಷಗಳತನಕ ಆ ಮಹಾಶಯನು ತನ್ನ ಪತ್ರಗಳನ್ನು ಸ್ವಂತ ಚಾರಕರ ಮೂಲಕವೇ ಕಳುಹಿಸುತ್ತಿದ್ದನಂತೆ. ಆದರೆ ತಂತಿಯು ಅವನಿಗೆ ತುಂಬಾ ಪ್ರಯೋಜನಕಾರಿಯಾಗುತ್ತಿತು. ಒಮ್ಮೆಯೇ ನೂರಾರು ತಂತಿಗಳನ್ನು ಕೊಡುತ್ತಿರುವುದನ್ನು ಅವರ ಕಾರ್ಯದರ್ಶಿಯವರು ಕಣ್ಣಾರೆ ಕಂಡಿದ್ದಾರೆಂದು ಹೇಳುತ್ತಾರೆ. ಏಕ ಕಾಲದಲ್ಲಿ ಕಳುಹಿಸಲ್ಪಡುವ ಈ ತಂತಿಗಳು ಒಂದಕ್ಕೊಂದು ವಿರೋಧವಾಗಿದ್ದುವು. ಒಂದರಲ್ಲಿ ಅವರು ಹಾಸಿಗೆಯಲ್ಲಿ ನರಳುತ್ತಿದ್ದಾರೆಂದು ಬರೆದರೆ ಇನ್ನೊಂದರಲ್ಲಿ ನಾನು ಕುದುರೆಯಿಂದಿಳಿದು ಮನೆಯನ್ನು ಪ್ರವೇಶಿಸಿರುವೆನಷ್ಟೆ ಎಂದು ಬರೆಯಲ್ಪಡುತ್ತಿತ್ತು. ಎಕ್ಸ್‌ಪ್ರೆಸ್ ತಂತಿಯನ್ನು ನಾಲ್ಕು ಬಾರಿ ಸಾಮಾನ್ಯ ದರದಲ್ಲಿಯೇ ಕಳುಹಿಸಬಹುದೆಂಬ ನಿಯಮದಿಂದಾಗಿ ಅವರ ತಂತಿಗಳು ದಿನ ಹೋದಂತೆ ಹೆಚ್ಚುತ್ತಾ ಬಂದವು. ಅದು ಜಾರಿಗೆ ಬಂದಂದಿನಿಂದ ದಿನಕ್ಕೆ ೧೦೦ ಅಥವಾ ೧೫೦ ಬಾರಿಯಾದರೂ ತಂತಿ ಕೊಡದ ದಿನವೇ ಇಲ್ಲ."

**ವಚನ ಭ್ರಷ್ಟ ಗೇಬ್ರಿಲ್.**

ಇತರರಿಗೆ ಭರವಸೆ ಕೊಡುವುದರಲ್ಲಿ ಗೇಬ್ರೀಲ್‌ನಷ್ಟು ಪ್ರವೀಣರು ಹುತ್ತಾರೂ ಇದ್ದಿಲ್ಲ. ಸಮಾರಂಭಗಳಲ್ಲಿ ಭಾಗವಹಿಸುವೆನೆಂದು ಭರವಸೆಯಿತ್ತರೆ ಅವನ ಪತ್ತೆಯೇ ಇಲ್ಲ. ಮುನ್ನುಡಿಗಳನ್ನು ಬರೆವೆನೆಂದು ಹೇಳಿದರೆ ಮುನ್ನುಡಿಗಳೇ ಇಲ್ಲ. ಅವನು ಕೊಟ್ಟ ಎಲ್ಲಾ ಭರವಸೆಗಳೂ ಮುರಿಯಲ್ಪಟ್ಟಿವೆ ಯೆಂದು ಗೇಬ್ರೀಲನ ಕಾರ್ಯದರ್ಶಿ

ಯರು ಬರೆಯುತ್ತಾರೆ. ಅನೇಕ ವೇಳೆ ಗೇಬ್ರಿಲನು ಭರವಸೆಗಳನ್ನು ಬರೆದು ಕೊಟ್ಟರೂ ಅವುಗಳು ಸೊಗಸಾಗಿ ಭ್ರಷ್ಟಗೊಳಿಸಲ್ಪಟ್ಟಿವೆ. ಪ್ಯಾರಿಸಿನ ಒಂದು ಸರಕಾರೀ ಸ್ವಾಗತದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ತನ್ನ ಸೇವಕನನ್ನು ದೂರದ ಗ್ರಾಮಕ್ಕೆ ಕಳುಹಿಸಿ ಅಲ್ಲಿಂದ 'ಮೋನ್‌ಶಿಯರ್ ಡಿ' ಅನೂಂಝೊರವರು ವಿಮಾನ ಢಿಕ್ಕಿ ಹೊಡೆದುದರಿಂದ ಗಾಯಹೊಂದಿದ್ದಾರೆ— ಪ್ಯಾರಿಸಿಗೆ ಬರಲು ಅನಾನುಕೂಲವಾದುದಕ್ಕೆ ವಿಷಾದಿಸುತ್ತೇನೆ' ಎಂದು ತಂತಿ ಕೊಡಿಸಿದನಂತೆ.

**ಸ್ತ್ರೀಯರಿಗೆ ಲೆಕ್ಕವಿಲ್ಲದ ಭರವಸೆ.**

ಗೇಬ್ರಿಲನಿಗೆ ಮದುವೆಯಾಗಿದ್ದರೂ ಅವನು ಇತರ ಸ್ತ್ರೀಯರೊಂದಿಗೇ ಹೆಚ್ಚಾಗಿ ಇರುವುದಿತ್ತು. ತನಗೆ ಬೇಕಾದ ಕಾಲಗಳಲ್ಲಿ ಅನೂಂಝೊ ಅವರಿಗೆ ಕೊಡುತ್ತಿದ್ದ ಭರವಸೆಗಳಿಗೆ ಲೆಖ್ಖವಿದ್ದಿಲ್ಲ. ಈಗ ಮದುವೆಯಾಗುತ್ತೇನೆಂದು ಹೇಳಿ ಅರೆಕ್ಷಣದಲ್ಲಿಯೇ ಮೋಸಮಾಡುವ ವಿಚಿತ್ರ ಕಲೆಯು ಅವನಿಗರಿತಿತ್ತು. ಅವನು ಭರವಸೆ ಕೊಡುವಾಗ ಎಂಥ ಸ್ತ್ರೀಯೂ ನಂಬುವಷ್ಟು ಯಥಾರ್ಥತೆಯಿಂದ ಗೇಬ್ರಿಲನು ನಡೆಯುತ್ತಿದ್ದ. ಒನ್ಮೆ ಅವನ ಕಾರ್ಯದರ್ಶಿಯೊಡನೆ ಒಂದು ತಂತಿ ಬಿಡಲು ಹೇಳಿದನಂತೆ. ತಂತಿ ಹೀಗಿತ್ತು. 'ಹೊರಟು ಬನ್ನಿ-ಏಕಾಂಗಿಯಾಗಿದ್ದೇನೆ" ಆದರೆ ಕವಿಯ ಮನೆಯಲ್ಲಿ ಆಗಲೇ ಐದು ಸ್ತ್ರೀಯರಿದ್ದರೆಂದು ಅವನ ಕಾರ್ಯದರ್ಶಿಯರು ಬರೆಯುತ್ತಾರೆ.

**ಇಟಲಿಯ 'ಡಾನ್ ಜುವಾನ್'**

ಗೇಬ್ರಿಲನ ಹೃಷ್ಟಪುಷ್ಟವಾದ ಶರೀರ ಪ್ರಕೃತಿಯಿಂದಾಗಿ ಕುಲೀನ ಸ್ತ್ರೀಯರಿಂದ ಮೊದಲ್ಗೊಂಡು ಸೇವಕಿಯರೊಡನೆ ಕೂಡಾ ಅವನು ಸಂಭೋಗ ಸುಖವನ್ನು ಪಡೆಯುತ್ತಿದ್ದನಂತೆ. ಅವನಿಗಿದ್ದ ಏಕಮಾತ್ರ ರೋಗವೆಂಧರೆ ಬಾಯಿಯಲ್ಲಿ ವಿಶೇಷ ಎಂಜಲು ಬರುವುದು. ಇದಕ್ಕಾಗಿ ಅವನು ನಾಲ್ಕೈದು ಕರವಸ್ತ್ರಗಳನ್ನು ತಪ್ಪಿಸುವುದಿಲ್ಲ. ಎಷ್ಟು ಸಿರಿವಂತ ಕುಟುಂಬದ ಸ್ತ್ರೀಯನ್ನಾದರೂ ಅವನು ತನ್ನ ಬಲೆಯಲ್ಲಿ ಹಾಕಿಕೊಳ್ಳುತ್ತಿದ್ದ. ಔಷಧಗಳನ್ನು ತಯಾರಿಸುವವರಿಗೆ ಇವನೆಂದರೆ ಬಹು ಪ್ರೇಮ. ಇಟಲಿಯ ಸುಪ್ರಖ್ಯಾತ ಕವಿಯಾದುದರಿಂದ ಇವನಿಂದ ಪ್ರಶಂಸಾ ಪತ್ರಗಳನ್ನು ತರಿಸಿ ಅವರು ಪ್ರಕಟಿಸುತ್ತಿದ್ದರು. ಕಾಮಪ್ರಚೋದಕವಾದ ಎಷ್ಟೋ ಔಷಧಗಳನ್ನು ಅವನು ಉಪಯೋಗಿಸುತ್ತಿದ್ದನು. ಅವನ ಹೆಮ್ಮೆಯ ಹೇಳಿಕೆಯೆಂದರೆ 'ಜೀವನಾಂತ್ಯದ ತನಕವೂ ತಾರುಣ್ಯದ ರಾಜನಾಗಿದ್ದೇನೆ' ಎಂಬುದಾಗಿತ್ತು.

**ನೂರಾರು ಮನೆಗಳು.**

ಗೇಬ್ರಿಲನಂತೆ ವಿವಿಧ ಮನೆಗಳಲ್ಲಿ ವಾಸಿಸಿದವರು ಜಗತ್ತಿನಲ್ಲಿ ಬೇರಾರೂ ಇರಲಿಕ್ಕಿಲ್ಲ. ಬಾಡಿಗೆಗೆ ತೆಗೆದುಕೊಂಡ ಮನೆಗಳನ್ನು ಅಧಿಕವಾಗಿ ಶೃಂಗರಿಸಿ ಆನಂದ ಪಡುವುದು ಅವನ ಅಭ್ಯಾಸವಾಗಿತ್ತು. ಪ್ರತಿಯೊಂದು ಮನೆಗೆ ಬೇಕಾದ ರೇಶ್ಮೆ ಬಟ್ಟೆಗಳು, ಹೂಬುಟ್ಟಿಗಳು, ಸಾವಿರಾರು ಪುಸ್ತಕಗಳು, ಎಲ್ಲೆಡೆಗಳಲ್ಲಿಯೂ ಮನೋಹರವಾದ ಹೂವಿನ ಪಾತ್ರೆಗಳು ಇವೆಲ್ಲವುಗಳನ್ನು ಅವನು ತರಿಸುವುದಿತ್ತು. ಶೃಂಗಾರಕ್ಕೆ ಸಂಬಂಧಿಸಿದ ಕೆಟಲಾಗುಗಳನ್ನು ಓದುವುದು ಅವನ ದಿನಚರಿಯ ಒಂದು ಕೆಲಸವಾಗಿತ್ತು. ಸುಖದ ಯಾವ ಸಾಧನವನ್ನೂ ಅವನು ಕೊಂಡಕೊಳ್ಳದೆ ಬಿಡಲಿಲ್ಲ. ಇಷ್ಟೆಲ್ಲಾ ಮಾಡಿ ಮನೆಗೆ ಬಾಡಿಗೆ ಕೊಡಲು ಹಣವಿಲ್ಲದಿದ್ದರೆ ಅವೆಲ್ಲವನ್ನು ಬಿಟ್ಟು ಹೋಗುವುದಕ್ಕೆ ಅವನಿಗೆ ಬೇಸರವಾಗುತ್ತಿದ್ದಿಲ್ಲ.

**'ಕೆಪ್ಪಾನ್ಸಿನಾ'**

ಫ್ಲೊರೆಂಟ್ಯಾನ್ ಪರ್ವತಗಳ ಬಳಿಯಲ್ಲಿ ಈ ಕವಿಯು ಒಂದು ಮನೆಯನ್ನು ೭೫,೦೦೦ ಲಯರ್‌ಗಳಿಗೆ ಕೊಂಡು ತನ್ನ ಹೆಚ್ಚಿನ ಗ್ರಂಥಗಳನ್ನು ಅಲ್ಲಿಯೇ ಬರೆದನು. 'ಕೆಪ್ಪಾನ್ಸಿನಾ' ಅರಮನೆಯು ಅಂದು ವೈಭವಗಳಿಂದ ಕೂಡಿತ್ತು. ಎಲಿನೋರಾ ಡ್ಯೂಸ್ ಅಲ್ಲದೆ ನೂರಾರು ತರುಣಿಯರು ಅವನ ಮನೆಯಲ್ಲಿದ್ದು ಅವನಿಗೆ ಆ ಕಾಲದಲ್ಲಿ 'ಸ್ವರ್ಗಸುಖ' ನೀಯುತ್ತಿದ್ದರು. ಸಾಲವಾದೊಡನೆ ಆ ಮನೆಯನ್ನು ಅವನು ಬಿಡಬೇಕಾಯಿತು.

**ಪತ್ರಿಕೋದ್ಯಮಿ**

ಈ ಮಹಾಶಯನು ಇಟಾಲಿಯ ಪ್ರಸಿದ್ಧ ಪತ್ರಿಕೋದ್ಯಮಿ, ಗ್ರಂಥಕರ್ತ, ನೆಂದು ಹಾಡಿ ಹೊಗಳಲ್ಪಡುವುದಲ್ಲದೆ ಇವನ ನಾಟಕಗಳನ್ನು ಜನರು ತುಂಬಾ ಗೌರವಿಸುತ್ತಾರೆ.

(೨೭ನೆ ಪುಟ ನೋಡಿರಿ)

# ಥೊರ್ಸಾನಿ

(ಇಂಗ್ಲೀಷ್ ಕತೆಯೊಂದರ ಅನುಕರಣೆ)





ಕಾರ್ನಳ್ಳಿ ದೊರೆ ಬೆನೆಟರು ಯುರೋಪಿನಿಂದ ಬಂದು ಕಡಿಮೆಯೆಂದರೆ ಹದಿನೆಂಟು ವರುಷಗಳಾದರೂ ಆಗಿರಬೇಕು. ಅವರಿಗೀಗ ಕಾರ್ನಳ್ಳಿಯಲ್ಲೊಂದು, ಮಾಸಕೆಯಲ್ಲೊಂದು-ಹೀಗೆ ಎರಡು ದೊಡ್ಡ ಕಾಫಿ ತೋಟಗಳಿವೆ. ಎರಡರಲ್ಲಿ ಒಟ್ಟಿಗೆ ಸುಮಾರು ೮೦೦ ಕೂಲಿಯಾಳುಗಳು ಕೆಲಸಮಾಡುತ್ತಾರೆ. ಆಳು ಕಟ್ಟುವ ಒಬ್ಬೊಬ್ಬನಿಗೆ ಒಂದು ಸಾವಿರದಿಂದ ಐದು ಸಾವಿರದ ವರೆಗೂ ಕೊಟ್ಟು, ಅವರ ಸುಮಾರು ೨೦ ಸಾವಿರ ರೂಪಾಯಿಗಳು ಅಡ್ವಾನ್ಸಾಗಿ ದಕ್ಷಿಣ ಕನ್ನಡ ಕ್ಕೆಳದವು—ಪ್ರತಿಯಾಗಿ ದಕ್ಷಿಣ ಕನ್ನಡದಿಂದ ಆ ೮೦೦ ಆಳುಗಳು ಗಟ್ಟ ಹತ್ತಿದರು.

ಬೆನೆಟ್ ಧೊರೆ ಯುರೋಪಿನಿಂದ [illegible] ಬಂದು ನಿಂತ ನಂತರ, ಇಂದಿಗೆ [illegible] ವರುಷಗಳಿಗೆ ಹಿಂದೆ ಒಮ್ಮೆ [illegible] ಮಾತೃಭೂಮಿಗೆ ಹೋಗಿ [illegible] ರು. ಹಿಂದಿರುಗುವಾಗ [illegible] ಕೂಡಿಕೊಂಡು ಥೊರ್ಸಾನಿಯೊಟ್ಟಿಗೆ ಬಂದಿದ್ದರು.

ಂ ಂ ಂ

ಬಾಬುರಾಯ ಈಗ ಕಾರ್ನಳ್ಳಿ ತೋಟದ ಮುನ್ಶಿ. ಮಿ| ಬೆನೆಟರಿಗೆ ಬಾಬುರಾಯನ ತಂದೆಯಷ್ಟು ಅಚ್ಚುಮೆಚ್ಚಿನ ಬಂಟ ಇನ್ನೊಬ್ಬನಿರಲಿಲ್ಲ. ಕಾರ್ನಳ್ಳಿ ತೋಟದ ಎಲ್ಲಾ ಮೇಲ್ವಿಚಾರಣೆಯನ್ನು ತನ್ನ ಅತ್ಯಂತ ನಂಬಿಗಸ್ಥನಾದ ವಾಸುರಾಯ (ಬಾಬುರಾಯನ ತಂದೆ)ನ ವಶಕ್ಕೆ ಕೊಟ್ಟಿದ್ದರು ಧೊರೆ. ಅವ ಕಳದ ವರುಷ ತೀರಿಹೋದಾಗ ಬೆನೆಟರು ಆ ದಿನವಿಡೀ ಹೇಟು ಇಡದೆ ಕಣ್ಣೀರು ಸುರಿಸಿದ್ದರು. ಕಾರ್ನಳ್ಳಿ ತೋಟದಲ್ಲಿ ವಾಸುರಾಯನ ೩೦೦ ಆಳುಗಳಿದ್ದವು. ತಂದೆ ತೀರಿದ ನಂತರ ಬಾಬುರಾಯನು ಕಾರ್ನಳ್ಳಿಗೆ ಬಂದು ನಿಂತ. ವಾಸುರಾಯನ ಸ್ಥಾನದಲ್ಲಿ ಮುನ್ಶಿಯಾಗಿ ಕಾರ್ನಳ್ಳಿ ತೋಟದ ಕೆಲಸದ ಮೇಲ್ವಿಚಾರಣೆಯನ್ನು ವಹಿಸಿದ.

ಬಿಳಿ ಜನರ ಖಾಸಗೀ ಮೈತ್ರಿಯು ಬಹಳ ನಿರ್ಮಲವಾದುದು. ಬಾಬುರಾಯನಿಗೆ ತೋಟದ ಅನುಭವ ಕಡಿಮೆ. ಈ ವರೆಗೂ ಮನೆಯಲ್ಲಿ ಉಂಡು ತಿಂದು ಸುಖದಲ್ಲಿದ್ದವ ತಂದೆಯೊಡನೆ ಒಂದೆರಡು ಸಲ ಗಟ್ಟ ನೋಡಲು ಕಾರ್ನಳ್ಳಿಗೇನೋ ಬಂದಿದ್ದ. ಅವನ ಆಗಿನ ಇತರ ಸಮಯದಂತೆ ಅದೂ ವಿನೋದದಲ್ಲಿಯೋ ವಿಹಾರದಲ್ಲಿಯೋ ಕಳೆದು ಹೋಗಿತ್ತು. ಆಗ ಬೆನೆಟರು ಹುಡುಗನ ಬೆನ್ನು ತಟ್ಟಿ ಒಂದು ಸಣ್ಣ ಪಿಸ್ತೂಲನ್ನು ಇನಾಮು ಕೊಟ್ಟಿದ್ದರು. ತರುಣ ಬಾಬುವಿಗೆ ಅಷ್ಟರಿಂದಲೇ ಬಹಳ ಗೌರವ ಧೊರೆಯ ಮೇಲೆ.

ಈಗಲಂತೂ ಬೆನೆಟರ ಕೈಕೆಳಗೆ ಮುನ್ಶಿಯಾಗಿ ನಿಂತಿದ್ದಾನೆ. ಬೆನೆಟರು ಅವನನ್ನು ಪುತ್ರವಾತ್ಸಲ್ಯದಿಂದ ನೋಡುತ್ತಿದ್ದಾರೆ. ಧೊರೆಯ ಬಂಗಲೆಯ ಸಮೀಪದ ಚಿಕ್ಕದೊಂದು ಬಂಗಲೆಯನ್ನು ಧರ್ಮಾರ್ಥವಾಗಿ ಬಾಬುವಿನ ವಾಸಕ್ಕೆಂದು ಬಿಟ್ಟಿದ್ದಾರೆ.

ಂ ಂ ಂ

ಮರುದಿನ ಬೆನೆಟ್ ಧೊರೆಗೆ ಅಲ್ಲಿದ್ದ ತನ್ನ ತೋಟದ ತನಖಿ ಮಾಡಿ ಬರಲು ಮೂವರೆಗೆ ಹೋಗಬೇಕಾಗಿತ್ತು. ತೋಟದ ಕೆಲಸ, ಲೆಖ್ಖಪತ್ರ, ಬಂಗಲೆ ದುರಸ್ತಿ—ಇವೆಲ್ಲವನ್ನು ಪರೀಕ್ಷಿಸಲು ಹದಿನೈದು ದಿನಗಳಾದರೂ ಬೇಕಾಗಬಹುದು. ಮುಂಚಿನ ರಾತ್ರಿ ಬಾಬುರಾಯನನ್ನು ತನ್ನಲ್ಲಿಗೆ ಡಿನ್ನರಿಗೆ ಆಮಂತ್ರಿಸಿದರು ಧೊರೆ. ಬಾಬು

ರಾಯ ತುಸು ನಾಚಿಕೆಯ ಪ್ರಕೃತಿ ಯವ. ಬೆನೆಟರಿಗೆ ಹಿಂದೂ ಜನರ ಸ್ವಭಾವ, ರೀತಿನೀತಿಗಳ ಅರಿವಿತ್ತು. ಅಷ್ಟೇ ಏಕೆ? ಹದಿನೆಂಟು ವರುಷ ಗಳ ಸಮ್ಮಿಲನದ ಪರಿಣಾಮವಾಗಿ ಅವರಲ್ಲಿ ಹಿಂದೂಮರ್ಜಿಯೇ ಬಹಳಮಟ್ಟಿಗಿತ್ತು. ಆದ್ದರಿಂದ ಸಾಮಾನ್ಯ ಮಟ್ಟದ ಸಂಕೋಚ ಮನೋವೃತ್ತಿಯನ್ನು ಅವರು ಕ್ಷಮಿ ಸ ಬಲ್ಲರು. ನಮ್ಮ ಬಾಬುರಾಯ ನಲ್ಲಿ ಅಷ್ಟು ಸಂಕೋಚ ಮಾತ್ರ ವಲ್ಲ, ಮುಖ ಹೇಡಿತನವೂ ಇತ್ತು. ಇದು ದೊರೆಗಳವರಿಗೂ ದೊರೆಸಾನಿ ಗಳವರಿಗೂ ಗೊತ್ತು. ಧೊರೆ ಮತ್ತು ಧೊರೆಸಾನಿ ಈ ಸಂಗತಿ ಯನ್ನು ತಮ್ಮೊಳಗೆ ಮಾತಾಡಿ ಕೊಂಡು ಬಾಬುರಾಯನಲ್ಲಿ ಸಲಿಗೆ ಯನ್ನು ಹೆಚ್ಚಿಸಬೇಕೆಂಬ ಉದ್ದೇಶ ದಿಂದಲೇ ಆ ದಿನ ಡಿನ್ನರಿಗೆ ಆಮಂ ತ್ರಿಸಿದ್ದರು.

೦ ೦ ೦

ಮೂವರೂ ಡಿನ್ನರಿಗೆ ಕುಳಿತರು. ಅಡಿಗೆ ಹೆಂಗಸು ಮಿಶ್ಯನಿನವಳು. ಧೊರೆಗಳಂತೂ ಸ್ವರಭೇದಗಳನ್ನು ಬಿಟ್ಟರೆ ಕನ್ನಡ ತುಳು ಭಾಷೆಗಳನ್ನು ಸ್ವಚ್ಛವಾಗಿ ಮಾತಾಡಬಲ್ಲರು. ಧೊರೆಸಾನಿಯೂ ಮೂರು ವರುಷ ಗಳಿಂದ ಧೊರೆಯೊಡನೆಯೂ ಅಡಿಗೆ ಯವಳೊಡನೆಯೂ ತುಳು ಕನ್ನಡ ಮಾತಾಡುವ ನಿರ್ಧಾರ ಮಾಡಿ, ಇಷ್ಟರಲ್ಲೇ ಕಲಿತಿದ್ದಳು. ಸರಿ. ಊಟದ ವೇಳೆ ಬಿಳಿ ದಂಪತಿಗಳ ತಮಾಷೆಗೆ ಪ್ರಾರಂಭವಾಯಿತು. ಬಾಬು ರಾವ್ ಎಲ್ಲಕ್ಕೂ ನಮ್ರತೆ ಯನ್ನು ತೋರಿಸುತ್ತಾ ಬಂದ. ತಟ್ಟೆಯನ್ನು ಪೂರ್ತಿ ಖಾಲಿ ಮಾಡು ವುದಕ್ಕೂ ಬಾಬುವಿಗೆ ಸಂಕೋಚ. ಮಿಸೆಸ್ ಬೆನೆಟ್ "ತಿ-ಗೆ-ದು ಕೋ ತಿನ್ನು-ಅಷ್ಟೇ ತಿನ್ನು ಯಾಕೆ?" ಎಂದು ರಾಗ ಎಳೆದಳು. "ನನ್ನ ಹುಡುಗಾ! ತಿನ್ನು-ತಿನ್ನು-ನಾಚಿಕೆ ಮಾಡಬೇಡ" ಎಂದರು ಧೊರೆ. ಬಾಬು ನಾಚಿಕೆಗೊಂಡ. ಅವ ಚಮಚಾ ಹಿಡಿಯುವಾಗ, ಕೂರಸಿಗೆ ಕೈ ಹಾಕುವವನಂತೆ ಬಹಳ ಜಾಗ್ರತೆ ತೆಗೆದುಕೊಳ್ಳುತ್ತಿದ್ದ. "ಕೆಲೆನ್ ಹೇಳುತ್ತಾಳೆ-ನೀನು ಯಾವಾಗಲೂ ನಾಚಿಕೆ ತೋರಿಸುತ್ತೀ ಅಂತೆ. ಮಾತಾಡುವದೇ ಇಲ್ಲವಂತೆ. ಯಾಕೆ ಹಾಗೆ ಮಾಡಬೇಕು?" ಬೆನೆಟ್ ಧೊರೆ ಕೇಳಿದರು. ಆ ಮಾತು ಕೇಳುವಾಗಲೂ ಬಾಬುರಾಯನಿಗೆ ನಾಚುಗೆ!

"ನೋಡು, ನನಗೆ ನಾಳೆ ಮಾವ ರೆಗೆ ಹೋಗಬೇಕು. ಅಲ್ಲಿ ಇನ್ಸ್ ಪೆಕ್ಷನ್ ಮುಗಿಯುವಾಗ ಹದಿನೈದು ದಿನ ಹಿಡಿಯಬಹುದು. ನೀನು ನನ್ನ ಬಂಗಲೆಯನ್ನು ನೋಡಿ ಕೊಂಡಿರಬೇಕು. ಕೆಲೆನಳು ಅಲ್ಲಿಗೆ ಬರುವುದಿಲ್ಲ. ಅವಳಿಗೆ ಹುಲಿ ಯೆಂದರೆ ತುಂಬಾ ಹೆದರಿಕೆ. ಅವಳನ್ನೂ ನೋಡಿಕೊ. ನೀನು ಧಾಂಡಿಗನಿದ್ದಿಯಾ! ಹುಡುಗಾ ಹುಶಾ ರಿರಬೇಕು."

ಧೊರೆಯ ಮಾತಿನಲ್ಲಿ ಸಲಿಗೆ- ವಿನೋದವಿತ್ತು. ಬಾಬು ನಮ್ರತೆ ಯಿಂದ "ಆಯ್ತು ಸರ್!" ಎಂದ.

ಊಟ ತೀರಿತು. ರಾತ್ರಿ ಬಹಳ ಹೊತ್ತಿನವರೆಗೆ ದಂಪತಿಗಳು ಮಗು ವನ್ನು ಮಾತಾಡಿಸುವಂತೆ ಬಾಬು ರಾಯನನ್ನು ಮಾತಾಡಿಸಿದರು. ಉತ್ತರ ಕೊಡಲೇಬೇಕಾಗಿ ಬಂದಾ ಗ 'ಹೌದು ಸಾರ್' 'ಅಲ್ಲ ಸಾರ್' 'ಆಯ್ತು ಸಾರ್' ಎನ್ನುತ್ತಾನೆ ಬಾಬು. ಮಿಕ್ಕವುಗಳಿಗೆಲ್ಲಾ ತಲೆ ಯಡಿಗಿಟ್ಟು, ಎಡ ಬಲ ನೋಡಿ ಮುಗುಳು ನಗುತ್ತಾನೆ ಮಾತ್ರ. ಧೊರೆಸಾನಿಯ ಯಾವ ತಮಾಷೆಗೂ ಅವನ ಉತ್ತರವಿಲ್ಲ- ವಿಧೇಯತೆಯ ಪ್ರದರ್ಶನ ಮಾತ್ರ.

ಬಾಬುವಿಗೂ ಧೊರೆಸಾನಿಗೂ ಹೇಳುವದನ್ನೆಲ್ಲಾ ಹೇಳಿ ಮರುದಿನ ಮುಂಜಾನೆ ಬೆನೆಟ್ ಧೊರೆಗಳು ಮಾವರೆಗೆ ಹೊರಟು ಹೋದರು.

೦ ೦ ೦

"ಇಲ್ಲಿ ಹೆಣ್ಣು ಹುಲಿಯೇನೂ ಇಲ್ಲವೆಂದೂ- ಹೆದರುವದು ಬೇಡ ವೆಂದೂ ಅವನಿಗೆ ಹೇಳು. ಅವನಿಗೆ ಊಟಕ್ಕೆ ಬರಲಿಕ್ಕೆ ಹೇಳು" ಮಗು ದಿನ ಸಂಜೆ ದೊರ್ಸಾನಿ ಅಡಿಗೆ ಯವಳೊಡನೆ ರಾಗ ಎಳೆಯುವದು ತನ್ನ ಬಿಡಾರದಲ್ಲಿದ್ದ ಬಾಬುವಿಗೆ ಕೇಳಿಸಿತು. ಆ ಮಾತಿನ ಅರ್ಥ ವಾದುದರಿಂದ ಅಡಿಗೆಯವಳು ಒಡ ತಿಯ ಮೊಗ ನೋಡಿ ನಕ್ಕಳು.

ಬಾಬು ಧೊರೆಯ ಬಂಗಲೆಗೆ ಬಂದ. ಅಡಿಗೆಯವಳು ತೋರಿಸಿದ ಟೇಬಲಿನ ಮುಂದೆ ಕುಳಿತ; ಮೇಜಿನ ಮೇಲೆ ತಟ್ಟೆಗಳೂ ಬಂದು ಕುಳಿ ತವು; ಧೊರ್ಸಾನಿಯೂ ಬಂದು ಹತ್ತಿರದಲ್ಲಿ ನಿಂತಳು. ಕೊನೆಯ ಸಂಗತಿಯು ಬಾಬುರಾಯನ ನಾಚು ಗೆಯನ್ನು ಹೆಚ್ಚಿಸಿತು. ಬಾಬು ರಾಯ ಕಷ್ಟದಿಂದ ತಿನ್ನುತ್ತಿದ್ದ. ತಿಂದಷ್ಟೂ ಕೆಲೆನಳ "ತಿನ್ನೂ" ಕೋರಿ ರಾಗ! "ಕ್ರಾಪ್ ಬಾಚಿಲ್ಲ- ವೇ-ಕೆ?" ಮಧ್ಯ ಮಧ್ಯದಲ್ಲಿ ಇಂತ ಹ ಅಡ್ಡ ಸವಾಲು. ಬಾಬು ಆಗಾಗ ದೊರ್ಸಾನಿಯ ಮುಖ ನೋಡಲೇ ಬೇಕಾಗುತ್ತಿತ್ತು. ಆ ಬೆಕ್ಕು ಕಣ್ಣುಗಳಲ್ಲಿ ಒಂದು ಪ್ರಕಾಶ ವೇನೋ ಇತ್ತು. ಅದರರ್ಥವೇ

ನೆಂದು ಆ ಕರಿಯ ಯುವನಿಗೇನು ಗೊತ್ತಾದೀತು? ಮುಖದಲ್ಲೊಂದು ಭಾವವಿತ್ತು. ಬಾಬುನಂತಹ ಕರಿ ಯುವಕರು ಹುಡುಗಿಯರನ್ನು ಕಂಡಾಗ ತೋರುವ ಛಾಯೆಯನ್ನೇ ತೋರಿಸುತ್ತಿದ್ದಳು ಆವಸಿದರು ಬಿಳಿ ಹುಡುಗಿ. “ಟಾಯಿಮ್ ಎಷ್ಟಾಯಿತು?” ಎನ್ನುತ್ತಾ ಬಾಬುವಿನ ಎಡಕೈಯನ್ನೆತ್ತಿ ನೋಡಿದಳು ಕೆಲೆನ್. ಬಾಬುನ ಕೈ ಅವಳೆತ್ತಿದ ವರೆಗೂ ಏರಿತು- ಅವಳು ಕೆಳಗಿಟ್ಟಲ್ಲಿ ಕೊರಡಿನಂತೆ ಬಿತ್ತು!

ಊಟವಾದ ಮೇಲೆ ತನ್ನ ಬಿಡಾರಕ್ಕೆ ಹೋಗಿ ಬಾಬು ತಪಸ್ವಿಯಂತೆ ಕುಳಿತುಕೊಂಡ.

o o o

ಕೊಠಡಿಯ ಬಾಗಿಲು ದೂಡಿದಂತಾಯಿತು. ಕೆಲಿನ ಒಳಗೆ ಬಂದಳು. ಬಾಬುವಿಗೆ ಇದೊಂದು ಆಕಸ್ಮಿಕ ಘಟನೆ. ಥೊರ್ಸಾನ್ಸಿ ಹಿಂದೆಯೂ ಇವನ ಬಿಡಾರಕ್ಕೆ ಬಂದುದುಂಟು. ಎಲ್ಲವನ್ನೂ ನೋಡಿಕೊಂಡು ಹೋದುದುಂಟು. ಆದರೆ ರಾತ್ರಿ ಹೊತ್ತು ಬಾಗಿಲು ದೂಡಿಕೊಂಡು ಒಳಬಂದಳಲ್ಲಾ-ಅದು ವಿಶೇಷ. ಅವನು ಅವಳನ್ನು ಬರಮಾಡಿಕೊಳ್ಳುವದಕ್ಕೂ ಮರೆತು ಬೆಪ್ಪನಂತೆ ಇದ್ದ. ಹೀಗೆ ಆವ ದಂಗುಬಡೆದು ಹೋದುದರಲ್ಲಿ ಥೊರ್ಸಾನ್ಸಿ ಯಾವ ವಿಶೇಷವನ್ನೂ ಕಾಣಲಿಲ್ಲ. ತಿಂಡಿಯು ಚಮಚಾ ಹಿಡಿಯುವಾಗ ಅಳುಕಿದ ಹುಡುಗನ ಅಂಜಿಕೆಗೂ ಒಂದು ಬೆಲೆಯಿದ್ದೀತೆ? ಅವಳು ನಗುತ್ತಾ “ಮಲಗಲಿಲ್ಲಾ ನೀನು?” ಎಂದವಳೇ ಬಾಬುನ ಹತ್ತಿರ ಬಂದು ಕುಳಿತಳು. ಬಾಬುರಾಯನಲ್ಲೀಗ ನಿತ್ಯದ ಸಂಕೋಚ ಮತ್ತು ಒಂದು ಹೊಸ ಅನುಮಾನ ಹುಟ್ಟಿತು. “ಯಾಕೆ ಮಾತಾಡುವದಿಲ್ಲ?” ಎಂದು ಇನ್ನಷ್ಟು ಒತ್ತಿ ಕುಳಿತು ಮಗುವಿನೊಡನಾಡುವವಳಂತೆ ಅವನ ಗಲ್ಲವನ್ನು ತಿರುಗಿಸಿ ಹಿಡಿದು ಕೇಳಿದಳು.

ತರುಣ ಬಾಬುವಿನಲ್ಲಿದ್ದ ಸಂಕೋಚತ್ವವು ಘನತೆಯುದು. ಅವನ ಆಳುಕೆಂಬುದು ಹೆಚ್ಚಾಗಿ, ಪಾಪದ ಹಾದಿಯು ತೀರಾ ಮುಂಭಾಗದಲ್ಲಿ ಎದ್ದು ನಿಲ್ಲುತ್ತಿತ್ತು. ಅದು ಅಷ್ಟು ಮುಂಭಾಗದಲ್ಲಿ ಇದ್ದುದು ತಪ್ಪಾಗಿರಬಹುದು, ಅದನ್ನು ಹಿಂಭಾಗಕ್ಕೆ ದೂಡುವುದು ಅಗತ್ಯವೆನಿಸಿರಬಹುದು. ಆದರೆ ಅದು ತಡೆಗಟ್ಟಿ ನಿಲ್ಲುವ ಹಾದಿ ಪಾಪದ್ದೆಂಬುದೂ ಅದನ್ನು ಪೂರ್ಣ ಕಿತ್ತೊಗೆದು

ಮುಂದರಿಸುವವೆಂದರೆ ನರಕದ ಕಡೆಗೆಂಬುದೂ ಸತ್ಯ. ಬಾಬುರಾವ್ ಗಂಭೀರವಾಗಿ ಹೇಳಿದ—

“ನೀವೀಗ ಬಂಗಲೆಗೆ ಹೋಗಿ. ಧೊರೆಗಳಿಲ್ಲದ ವೇಳೆ ಇಷ್ಟು ಸಲಿಗೆಯಿಂದ ವರ್ತಿಸುವದು ಉಚಿತವಲ್ಲ”

“ಹೋ! ಅದರಲ್ಲೇನೂ ಇಲ್ಲ. ಅವರಿನ್ನು ಹದಿನೈದು ದಿವಸ ಬರುವದಿಲ್ಲ. ಏಕೆ ಹೆದರಬೇಕು? ಹುಚ್ಚು ಹುಡುಗ!” ಧೊರ್ಸಾನಿ ಅವನ ಕ್ರಾಪನ್ನು ಸವರುತ್ತಾ ಮುಖ ನೋಡಿ ಮುತ್ತಿಟ್ಟಳು.

ಬಾಬುರಾವ್ ಮೌನ.

ಎದೆಯರ್ಧದ ಕೆಳಗೆ, ಅರ್ಧ ತೊಡೆಯ ಮೇಲೆ, ಮಾತ್ರವಿದ್ದ ರಾತ್ರಿ ಪೋಷಾಕಿನಲ್ಲಿದ್ದಳು ಧೊರೆಸಾನಿ.

“ನೀನೊಂದು ಸಣ್ಣ ಮಗು! ನಿನಗೇನೂ ಗೊತ್ತಿಲ್ಲ. ನಾನು ಕಲಿಸುತ್ತೇನೆ ನಾನು ಕಲಿಸಿದ್ದನ್ನು ಕಲಿಯದೆ ಚಂಡಿ ಹಿಡಿಯಬೇಡ!” ಎನ್ನುತ್ತಾ ಕೆಲೆನ್ ಕಿಲಕಿಲನೇ ನಕ್ಕಳು. ಅವಳ ಬಿಳಿಯ ಬಾಹುಗಳು ಬಾಬುರಾಯನ ಕಂಠವನ್ನು ಬಿಗಿದವು.

ತಾನು ಪಾಪವನ್ನು ಮಾಡುತ್ತಿದ್ದೇನೆ, ತನ್ನನ್ನು ಮಗನಂತೆ ನೋಡುತ್ತಿರುವ ಧೊರೆಗೆ ದ್ರೋಹವನ್ನು ಬಗೆಯುತ್ತಿದ್ದೇನೆ- ಎಂಬ ನೋವು ಬಾಬುರಾಯನ ಎದೆಯಲ್ಲಿತ್ತು. ಆದರೆ ಇದ್ದ ನರಕಕ್ಕೆಳೆಯುವದಷ್ಟೇ ಅಲ್ಲ-ನರಕದ ನರಕವನ್ನೇ ಬೇಕಾದರೆ ನಿರ್ಮಿಸಲಿ ಈ ಪಾಪ- ಆ ಪಾಪದಲ್ಲಿಷ್ಟು ಸುಖವಿರುವುದಾದರೆ ಅದಕ್ಕಾಗಿ ನರಕಗಳನ್ನೆಲ್ಲಾ ಅನುಭವಿಸಬಹುದು — ಅನ್ನಿಸಿತು ಆ ಸಮಯದಲ್ಲಿ ರಾಯರಿಗೆ! ನಾಚುಗೆಯು ಪಾಪಭೀರುತ್ವವು ಅನ್ಯರ ಮೇಲೆ ನುಗ್ಗದಂತೆ ತಡೆಯಬಹುದು, ಅನ್ಯರು ನುಗ್ಗಿ ಬಂದಾಗಲೂ ತಡೆಯುವಷ್ಟು ಶಕ್ತಿ ಅದಕ್ಕೆಲ್ಲಿಂದ? ಬಾಬು ಜಡಭರತನಲ್ಲ; ಆವರೆಗೂ ತೋಳಿನ ಸ್ಪರ್ಶವಾಗದ ಜಡವೇರಿದ್ದ ತರುಣ!

ಂ ಂ ಂ

“ಗುಡ್ ನ್ಯಾಟ್ ಬಾಬು! ಏನೇನೋ ಯೋಚಿಸುತ್ತಾ ಬೇಸರ ಪಟ್ಟುಕೊಳ್ಳಬೇಡ. ಬೆಳಗ್ಗಿನ ಟೀಗೆ ಬಂಗಲೆಗೆ ಬಾ” ಬಾಗಿಲು ತೆರೆದು ಹೊರಗೆ ಬರುವಾಗ ಧೊರ್ಸಾನಿ ಹೇಳಿದಳು.

ಅದಕ್ಕೂ ಬಾಬುರಾವ್ ಮೌನ.

ಂ ಂ ಂ

ಉಳಿದ ಹದಿನಾಲ್ಕು ದಿನಗಳೂ ಕಳೆದವು. ಎಷ್ಟು ಬೇಗನೆ! ಕೆಲೆನಳಿಗೂ ಬಾಬುವಿಗೂ, ದಿನಕ್ಕೆ ಹನ್ನೆರಡೇ ಘಂಟೆಯೆಂದು ತೋರಿರಬೇಕು. ಇಲ್ಲಿ ಕಡಿಮೆಯಾದ ಘಂಟೆಗಳು ಅಲ್ಲಿ ಮಾವಟೆಯಲ್ಲಿದ್ದ ಬೆನೆಟ್ ಧೊರೆಗಳ ದಿನಗಳನ್ನು ಕೂಡಿರಬೇಕು. ಧೊರ್ಸಾನಿಯನ್ನು ಹುಲಿ ತಿನ್ನದಂತೆ ನೋಡಲು ಬಾಬುರಾಯನನ್ನು ನೇಮಿಸಿ ಹೋಗಿದ್ದನಾದರೂ, ಹುಲಿಗೆ ಧೊರ್ಸಾನಿ ಬೇಕಿದ್ದುದಕ್ಕೂ ಹೆಚ್ಚಾಗಿ ಧೊರೆಗೆ ಧೊರ್ಸಾನಿ ಬೇಕಲ್ಲ! ಅವಳನ್ನೆಷ್ಟು ದಿನ ಬಿಟ್ಟಿರಬಲ್ಲನು. ಆದ್ದರಿಂದ ಅಲ್ಲಿಯ ಕೆಲಸವನ್ನು ಅವಸರವಸರದಿಂದ ಮುಗಿಸಿಕೊಂಡು ಧೊರೆ ಕಾನರ್ಳ್ಳಿಗೆ ಬಂದ.

ಇಲ್ಲಿ ಎಲ್ಲರೂ ಕ್ಷೇಮ. ಮತ್ತೂ ಸಂತೋಷದ ವಿಷಯವೆಂದರೆ ಬಾಬುರಾಯನ ಸಂಕೋಚವೀಗ ಮಾಯವಾಗಿದೆ. ಕೆಲೆನಳಿಗೂ ತನಗೂ ಯೋಗ್ಯ ಸಂಗಾತಿಗಳಿಲ್ಲವಲ್ಲಾ—ಎಂಬ ಬೇಸರ ಕೂಡಾ ಮುಂದಕ್ಕಿಲ್ಲ.

ಂ ಂ ಂ

ಆ ಮೇಲಿನ ದಿನಗಳು ಯಾರಿಗೂ ಬೇಸರವನ್ನೀಯದೆ ಗತಿಸಹತ್ತಿದವು. ಬೆನೆಟ್ ಧೊರೆ ರಾತ್ರಿ ಏಳು ಘಂಟೆಯ ನಂತರ ಬ್ರಾಂಡಿಯ ಮಜಾದಲ್ಲಿರುತ್ತಿದ್ದ, ಮತಿ ಮರೆಯುತ್ತಿದ್ದ. ಬಾಬುರಾಯನ ರಾತ್ರಿ ಫಲಾಹಾರವೀಗ ಧೊರೆಯ ಬಂಗಲೆಯಲ್ಲಿಯೇ. ಮೆದುಳು ನೆನೆದು ತೂಕಡಿಸುವಾಗ ‘ಹೇ ಹುಡ್ಗಾ - - ಗಾ, ಏ - ನೋ- ಮಾಪಾ- ಮಾ- ತಾಡೋ’ ಎನ್ನುವನು ಧೊರೆ. ‘ಅವನ ನಾಚುಗೆಯಿನ್ನೂ ಹೋಗಿಲ್ಲ!’ ಎಂದು ಅದಕ್ಕೆ ಸ್ವರ ಕೂಡಿಸಿ ಪ್ರೀತಿಯ ಬಾಬುವನ್ನು ನೋಡಿ ಕಣ್ಣಣಕಿಸುವಳು ಕೆಲೆನ್. ತಾನು ಅಮಲಿನಲ್ಲಿ ತೂಕಡಿಸಬೇಕು. ಆ ಸಮಯದಲ್ಲಿ ಸ್ಮೃತಿಯೆಂಬುದಿರುವವರೆಗೂ ಕೆಲೆನಳ ಮತ್ತು ಹುಡುಗನ ನಗೆಯು ಕೇಳುತ್ತಲೇ ಇರಬೇಕು-ಬೆನೆಟ್ ಧೊರೆಯ ರಾತ್ರಿ ಕಾಲದ ವಿನೋದವಿದು! ಒಂದೆರಡು ಘಂಟೆ ಹೀಗೆ ಒದ್ದಾಡಿ ಸೋಫಾದಲ್ಲಿ ಬಿದ್ದುಬಿಟ್ಟನೆಂದರೆ, ಧೊರೆಗೆ ಪ್ರಜ್ಞೆ-ಸ್ವಚ್ಛಮತಿ ಬರುವದು ಮರುದಿನ ಮುಂಜಾನೆಯೇ ಸರಿ.

ಕೆಲೆನ್-ಬಾಬುಗಳೊಳಗಿನ ಮಾತು-ನಗೆ-ಕೆಲಸಗಳರೀತಿ ಧೊರೆಗೆ ಸ್ಮೃತಿಯಿರುವಾಗ ಒಂದು ವಿಧ; ಸ್ಮೃತಿ ತಪ್ಪಿದಾಗ ಮತ್ತೊಂದು ರೀತಿ. ಧೊರೆಯೆಚ್ಚರಿರುವಾಗಿನ ಇವರ ವಿನೋದವೆಲ್ಲಾ ಒಡೆಯನ ಆನಂದಕ್ಕಾಗಿ. ಆ ಮೇಲಿನದು ಸ್ವಂತ ತೃಪ್ತಿಗಾಗಿ!

ಆದರೆ ಬಾಬುರಾಯನಲ್ಲಿ ಸ

ಕೋಚ, ಪಾಪದ ಭಯ, ಯಜಮಾನನ ಹೆದರಿಕೆ- ಇವೆಲ್ಲವುಗಳಿಂದಾಗಿ ಅತಿರೇಕ ಜಾಗ್ರತೆ ಈಗಲೂ ಇತ್ತು. ಅದು ಅಗತ್ಯವಿಲ್ಲವೆಂದು ಕೆಲೆನಳ ಸಾಧನೆ.

○ ○ ○ ○ ○

ಒಂದು ರಾತ್ರಿ ಧೊರೆ ಮಿತಿಮೀರಿದ ಅಮಲಿನಿಂದ ತೂಕಡಿಸುತ್ತಿದ್ದ. ಬಾಬುರಾವ್ ಆ ರಾತ್ರಿ ತೋಟದಲ್ಲಿರುವ ಅಗತ್ಯ ಬಿದ್ದಿತ್ತು. ಧೊರೆ ಅಮಲಿನಲ್ಲಿ ಕೆಲೆನಳನ್ನೊಮ್ಮೆ ಬಾಬುವನ್ನೊಮ್ಮೆ ಕರೆಯುತ್ತಿದ್ದ. ಧೊರೆಸಾನಿ ಬಂದು ರೋಗಿಯನ್ನು ಉಪಚರಿಸುವಂತೆ ಗಂಡನ ಆರೈಕೆಗೆ ತೊಡಗಿದಳು. ಅಪ್ಪಿಕೊಂಡು ಹೋಗಿ ಸೋಫದಲ್ಲಿ ಕೂತುಕೊಳ್ಳಿಸಿ ಕರವಸ್ತ್ರದಿಂದ ಗಂಡನ ಮುಖವನ್ನೊರಸುತ್ತಿದ್ದಳು ಕೆಲೆನ್ ಎಲ್ಲಾ ರಾತ್ರಿಗಳನ್ನೂ ಅಮಲಿನಲ್ಲಿ ಕಳೆದಿದ್ದ ಬೆನೆಟ ಧೊರೆಗೆ ಅವಳ ಸ್ಪರ್ಶಸುಖವು ಆ ಅರೆಮರವೆಯಲ್ಲಿ ಕೂಡಾ ಸ್ವರ್ಗತುಲ್ಯವಾಗಿತೋರಿತು. 'ಕೆ-ಕೆ-ಕೆ-ಲೇ-ನ್! ನ-ನ್ನ-ಪ್ರಿಯ-ಕೆಲೇನ!' ಎಂದವಳ ಕಂಠ ಬಾಚಿಕೊಂಡ. ಅವಳು ಅವನ ಮುಖಕ್ಕೊಂದು ಮುತ್ತುಕೊಟ್ಟು ತುಸು ದೂರ ಸರಿದು ನಿಂತಳು. 'ಬಾ-ಬಾ' ಎಂದು ಬೆನೆಟ್ ಇದಿರಿಗೆ ಮುಗ್ಗರಿಸಿದ. ಹಿಡಿಯಲು ಬಂದ ಕೆಲೆನಳ ತಲೆ ಗಡಕ್ಕನೆ ಧೊರೆಯ ತಲೆಗೆ ತಾಗಿತು. ಹಾಯ್! ನನ್ನ-ಸಿರೀ-ಪ್ರೀ-ತಿಯ ಕೇಲೆನಾ, ಹಾಯ್!" ಬೆನೆಟ್ ನೋವಿನಿಂದ ಮುಂದಲೆ ಸವರಿಕೊಂಡ.

ಕೆಲೆನ ಗಂಡನ ತಲೆಯನ್ನು ತಿಕ್ಕಿದಳು. ಮುಂದಲೆಗೊಂದು ಮುತ್ತು ಕೊಟ್ಟು ಅವನ ಮುಖನೆತ್ತಿ ಹಿಡಿದು ಪ್ರೇಮದಿಂದ ಹೇಳಿದಳು- "ಎಲ್ಲಿಯಾದರೂ ತಲೆಯೊಡೆದು ಸತ್ತು ಹೋಗುತ್ತಿದ್ದರೆ ನನಗೆಂತಹ ಗತಿಯೊದಗುತಿತ್ತು! ನಾನೇ ಕೊಂದು ಹಾಕಿದೆನೆಂದಾಗುತ್ತಿತ್ತಲ್ಲಾ!"

"ಇಲ್ಲಾ — ನಾನು .... ಬರೆದು ಹಾಕುತ್ತೇನೆ. ನಾನೇ — ತಲೆ ಬಡೆದುಕೊಂಡು— ಪ್ರಾಣ ತೆಗೆದುಕೊಂಡೆನೆಂದು — ತಾ —ಕಾಗದ —ತಾ—ತಾ. ಈಗಲೇ —ಬರೆಯುತ್ತೇನೆ!" ಬೆನೆಟ್ ತೊದಲಿದ.

ಕೆಲೆನಾ ಕಾಗದ ಪೆನ್ ತಂದು ಕೊಟ್ಟಳು. ಧೊರೆ ತೂಕಡಿಸುತ್ತಾ ಗೀಚಿದ. ಬರೆಯುವದಕ್ಕೆ ಬೇಕಾಗುವ ಸಹಕಾರ ಸಲಹೆಗಳು ಕೆಲೆನಳಿಂದ ದೊರೆತವು. ಬೆನೆಟ್ ಧೊರೆಯ ದಸ್ಕತು ಬಿತ್ತು.

ಮರುದಿನ ರಾತ್ರಿ. ಅವಳು ಮತ್ತು ನಿದ್ದೆಯೊಟ್ಟಿಗೆ ಥೊರೆ ಸೋಫಾದಲ್ಲಿ ಬಿದ್ದಿದ್ದ. ಎಲ್ಲಾ ಕೆಲಸವನ್ನೂ ಅವಸರವಸರದಿಂದ ತೀರಿಸಿ ಬಾಬುರಾವ್ ಥೊರೆಯ ಬಂಗಲೆಗೆ ಹೊರಟ. ಬೆಟರಿಯ ಲೈಟನ್ನೇ ಕಾಯುತ್ತಿದ್ದ ಕೆಲೆನ್ ಓಡಿ ಬಂದು ತೋಟದಲ್ಲೇ ಅವನನ್ನಿದಿರುಗೊಂಡಳು. ಅವಳಲ್ಲಿ ಆದಿನವಿದ್ದ ನವೀನ ಉತ್ಸಾಹವನ್ನು ಅರಿತುಕೊಂಡ ಬಾಬು.

“ನನ್ನ ಪ್ರಿಯ ಬಾಬ! ನಿನ್ನ ಸಂಕಟವನ್ನು ದೂರಮಾಡುವ ಉಪಾಯ ಕಂಡುಹಿಡಿದಿದ್ದೇನೆ” ಹುಡುಗನನ್ನಾಲಿಂಗಿಸಿ ಹೇಳಿದಳು ಕೆಲೆನ. ಬಾಬು ಅವಳನ್ನೇ ನೋಡುತ್ತಾ ನಿಂತ.

‘ನೋಡು!’ ಒಂದು ಕಾಗದವನ್ನು ಬಾಬುರಾಯನ ಕೈಗೆ ಕೊಟ್ಟು ಹೇಳಿದಳು ಕೆಲೆನ—

“ಆ ಪ್ರಾಣಿ ಅಲ್ಲಿ ಅಮಲೇರಿ ಬಿದ್ದುಕೊಂಡಿದೆ. ನೀನು ಧೈರ್ಯ ತೆಗೆದುಕೋ. ಆ ಕಾಗದದಲ್ಲಿ ಈ ದಿನದ ತಾರೀಕು ಹಾಕಿದೆ. ಇದೇ ತಕ್ಕ ಸಮಯ! ನಮ್ಮ ಹಾದಿಯಲ್ಲಿರುವ ಕಂಟಕವೊಂದನ್ನು ಈಗಲೇ ನಿವಾರಿಸಿ ಕೊಳ್ಳೋಣ—ಏನೂ ಭಯವಿಲ್ಲ. ನೋಡು- ಆ ಕಾಗದ ಓದಿಕೊ! ತ್ವರೆ ಮಾಡು!”

ಬಾಬು ಅವಸರವಸರದಿಂದ ಕಾಗದ ಓದಿಕೊಂಡ. ಅಕ್ಷರಗಳು, ಬರಹದ ಸಾಲುಗಳು ಅಸ್ತವ್ಯಸ್ತವಾಗಿದ್ದವು — ಅಮಲೇರಿದವನು ಅಥವಾ ಸಾಯಲು ಹೊರಟವನು ಬರೆದ ಹಾಗೆ!

‘ನಾನು ಜೀವನದಲ್ಲಿ ಜಿಗುಪ್ಸೆಗೊಂಡು ಆತ್ಮಹತ್ಯೆಮಾಡಿಕೊಂಡಿದ್ದೇನೆ-ನನ್ನ ಪ್ರೀತಿಯ ಕೆಲೆನಳಿಗಾಗಿ ಮಾತ್ರ ಮರುಗುತ್ತೇನೆ. ನನ್ನ ಎಲ್ಲಾ ಐಶ್ವರ್ಯವು ಕೆಲೆನಳಿಗೆ ಸೇರತಕ್ಕದ್ದು. ನನ್ನ ಮರಣಕ್ಕೆ ನಾನೇ ಜವಾಬ್ದಾರನಿದ್ದೇನೆ.

ಇ. ವಿ. ಬೆನೆಟ್,
೨೦ - ೧೧—೩೮.

ಓದುತ್ತಿದ್ದಾಗ ಬಾಬುವಿನ ದೇಹವೆಲ್ಲಾ ಕಂಪಿಸಿತು, ಮೈ ಬೆವರಿತು.

‘ರಕ್ಕಸೀ!’ ನಡುಗುವ ಧ್ವನಿಯಲ್ಲಿ ಉದ್ಗರಿಸಿದ ಬಾಬು. ಕಾಗದವನ್ನು ಹರಿದು ಚೂರು ಚೂರು ಮಾಡಿ ಕೆಲೆನಳ ಮುಖಕ್ಕೆಸೆದ. ಆ ಮೇಲೆ ಅಲ್ಲಿ ನಿಲ್ಲಲಿಲ್ಲ.

ಮಿಸ್ಟರ್ ಮತ್ತು ಮಿಸಿಸ್ ಬೆನೆಟರು ತೋಟದಲ್ಲಿ ಸೋಫವನ್ನಿಡಿಸಿ ಕುಳಿತಿದ್ದರು. ಮಾತಿನ ಮಧ್ಯೆ ಬೆನೆಟ್ ಹೇಳಿದ—“ಆ ಹುಡುಗ ಹೋಗಿ ಒಂದು ವಾರವಾಯಿತು. ಹೇಳದೆ ಕೇಳದೆ ಹೋಗಿ ಬಿಟ್ಟ. ಅವನ ಸ್ವಭಾವವೇ ಹಾಗೆ—ಎಲ್ಲದರಲ್ಲಿಯೂ ಸಂಕೋಚ, ದಾಕ್ಷಿಣ್ಯ. ಹುಚ್ಚು ಹುಡುಗ”

ಲೇಡಿ ಬೆನೆಟಳ ಉತ್ತರವಿಲ್ಲ!

-ವಿ. ಹೆ.

## ಅಂತರಂಗದ ಸ್ಪರ್ಧೆಯನ್ನು ಬಿಡಿಸುವವರಿಗೆ—

ಅಂತರಂಗ ಸ್ಪರ್ಧೆಯಲ್ಲಿ ಈ ಕೆಳಗಿನ ಶಬ್ದಗಳಲ್ಲಿ ಕೆಲವನ್ನು ಉಪಯೋಗಿಸಿದರೆ ಸರಿಯಾದ ಉತ್ತರವು ಸಿಗುತ್ತದೆ:—

ವಿನೋದಮಯ, ಆನಂದಮಯ, ಕದನ, ಕವನ, ಆರಾಮ, ವಿರಾಮ, ದರಹಸಿತ, ಮಧುರ, ನವೀನ, ಬಿಸಿ, ಹಸಿ, ಸಿಹಿ, ಸುಭಾಷಚಂದ್ರ, ದ್ರವಿಡ, ಗಡ್ಡ, ಷಡಾಗಮ, ಸೇರದೆ, ಶಾರದೆ, ಮಳೆನೀರು, ಜನ, ತರುಣ, ತಡಿ, ತಟ, ಧರ, ಯಮ, ಜವ, ಪರಮ, ಗರುಡ, ಕರ, ವಧು, ರಣದ, ಧಮಸ,

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು ‘ಗೆಳೆಯರ ತಂಡ’ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . . . . . . . . . . .

ಸಹಿ. . . . . . . . . . . . . . . . . . . . . . . . . . . . . . .

# ನಕ್ಕು ವಿಚಾರಿಸುವಿರೋ? ವಿಚಾರಿಸಿ ನಗುವಿರೋ?

[ವಿಚಾರ 'ಕೆಮರಾ'ದಿಂದ ಹಿಡಿದ 'ಸ್ನೇಪ್ ಶಾಟ್ಸ್' ದೃಶ್ಯಾವಳಿ.]

□ ∴ □

## ದೃಶ್ಯ ೪

(ದಾಮೋದರ ಶಾಸ್ತ್ರಿಗಳು ಬೆಳಿಗ್ಗೆ ಜಾಮಹೊತ್ತಿನ ಸಮಯ ತನ್ನ ಮನೆಯ ಚಾವಡಿಯಲ್ಲಿ ಕುಳಿತುಕೊಂಡು ವೀಳ್ಯಹಾಕಿ ಹೊಗೆಸೊಪ್ಪಿನ ಎಸಳನ್ನು ಬಿಡಿಸಿ ಅದರ ಹೊಯಿಗೆ ಸೆಡೆಯುತ್ತಿದ್ದಾರೆ. ಗೋಪಯ್ಯ ಪಂಡಿತರ ಸವಾರಿ ಬರುತ್ತೆ.)

ದಾ. ಶಾಸ್ತ್ರಿ:— ಓಹೋಹೋ! ಪಂಡಿತರು! ಸವಾರಿ ಬರ್ಲಿಂದೆ!

ಗೋಪಯ್ಯ:— ಬಂತಲ್ಲ! ಏನಾದರೂ ಮದ್ದು ಗಿದ್ದು ಕೊಡ್ಲಾ?

ದಾ. ಶಾಸ್ತ್ರಿ; — ಹಹ್ಹ ಹ್ಹಾ! ಏನು ತಮಾಷೇಂತೇನೆ! ನಿಮ್ಮ ಅಜ್ಜನೋ ಪಿಜ್ಜನೋ ಯಾರೋ ಪಂಡಿತರಾಗಿದ್ದು ಮದ್ದು ಕೊಟ್ಟು ಊರಿಗುಪಕಾರ ಮಾಡಿದ್ದರಿಂದ ಅಭಿಮಾನಾರ್ಥವಾಗಿ ನಿಮ್ಮ ಮನೆತನಕ್ಕೆ ಬಂದ ಆ ಹೆಸರು ಪರಂಪರೆಯಿಂದ ನಿಮಗೂ ಬಂತೆನ್ನಿ. ಹಾಗೆ ಮನೆಮರ್ಯಾದೆಯಿಂದ ನಿಮ್ಮನ್ನು ಪಂಡಿತರೇ ಎಂದರೆ ಮದ್ದು ಬೇಕಂತೀರಲ್ಲಾ? ಮದ್ದು ಕೊಡೋದಕ್ಕೆ ನಿಮಗೇನು ಗೊತ್ತದೆ? ಭದ್ರಮುಷ್ಟಿಯಂದರೆ ಮಂಗನಮುಷ್ಟಿ ಅಂತೀರೋ ಏನೋ ನೀವು! ಹಹ್ಹ ಹ್ಹಾ! ಎನ್ನ ರಸಿಕ ನಮ್ಮ ಗೋಪಯ್ಯಾ! (ಪಟೇಲ್ ರಾಮಣ್ಣ ಸೆಟ್ರು ಬರುವರು) ಓಹೋಹೋಹೊ! ಪಟೇಲ್ರು! ಬರೋಣಾಗಲಿ, ಬರೋಣಾಗಲಿ!

ರಾಮಣ್ಣ ಸೆಟ್ರು:— ಬಂತಲ್ಲ! ಏನು ತೀರ್ವೆಗೀರ್ವೆ ಹಣ ಏನಾದ್ರೂ ಕೊಡ್ತೀರಾ?

ದಾ. ಶಾಸ್ತ್ರಿ:— ಹ್ಹಹ್ಹ ಹ್ಹಾ! ಸೆಟ್ರೂ ಗೋಪಯ್ಯನೋರ ಹಾಗೆ ಕುಶಾಲುಗಾರ!

ರಾ. ಸೆಟ್ರು— ಏನು ಕುಶಾಲ್ರೀ?

ದಾ. ಶಾಸ್ತ್ರಿ:— ನೋಡಿ, ನಿಮ್ಮ ಪೂರ್ವಜರು ಯಾರೋ ಪಟೇಲರಿದ್ದು ಬಹಳ ಕಾರ್ಬಾರು ಮಾಡಿದ್ದರಿಂದ ನಿಮ್ಮ ದೊಡ್ಡ ಮನೇನ್ನ ಪಟೇಲ್ರ ಮನೇಂತ ಊರು ಕರೆಯಿತು. ಆ ಮನೆತನದವರನ್ನ ಅಭಿಮಾನದಿಂದ ಪಟೇಲ್ರು ಪಟೇಲ್ರು ಅಂತ ಪರಂಪರೆಯಿಂದ ಹೇಳುತ್ತಾ ಹೇಳುತ್ತಾ ಬಂದು ಊರುಪಟೇಲ್ಕೆ ಮುಖಾ ನೋಡದ ನಿಮ್ಮನ್ನೂ ಪಟೇಲ್ರು ಅಂದ್ರೆ ತೀರ್ವೆಗೀರ್ವೆ ಕೊಡ್ತೀರಾ ಅಂತೀರಿ ನೀವು! ಹ್ಹಹ್ಹ ಹ್ಹಾ! ಗೋಪಯ್ಯನವರೂ ಹಾಗೇ ಮದ್ದು ಗಿದ್ದು ಕೊಡ್ಲಾ ಅಂತಾರೆ! ಹ್ಹಹ್ಹ ಹ್ಹಾ! (ಮೂಲೀಗಾರ ಜೋಗಯ್ಯನವರು ಬರುವರು) ಓಹೊ! ಮೂಲೀಗಾರ್ರೆ! ಬನ್ನೀಂದೆ.

ಮೂ. ಜೋಗಯ್ಯ:— ಬಂದೆ, ನನ್ನ ಮೂಲೀತನ ಹಾಕ್ಕೊಂಡು ಒಂದು ಐವತ್ತು ಸಾವಿರ ರೂಪಾಯಿ ಸಾಲಕೊಡಿಸಿ ನೋಡೋಣ.

ದಾ. ಶಾಸ್ತ್ರಿ:— ಹ್ಹಹ್ಹ ಹ್ಹಾ! ಇಂದೇನೋ ಇಲ್ಲಿ ರಸಿಕರ ಸಭೆಯೇ ನಡೆಯೋ ಹಾಗಿದೆ! ಜೋಗಯ್ಯನೋರದ್ದು ಚಿಲ್ಲರೆ ತಮಾಷೆಯಲ್ಲ— ಐವತ್ತು ಸಾವಿರದ್ದು! ನೋಡಿ ಸೆಟ್ರೇ, ಯಾವ ರಾಯನ ಕಾಲದಲ್ಲೊ ಈ ಜೋಗಯ್ಯನ ಹಿರಿಯರು ಈ ಗ್ರಾಮಕ್ಕೆ ಮೂಲಿಗಾರರಾಗಿದ್ದಿರಬೇಕು. ಆದರೆ ಈ ಮೂಲವನ್ನ ಸಾಲ ನುಂಗಿ ಈಗೆಷ್ಟು ತಲೆ ಆಯಿತೋ! ಆದರೆ ಅಂದಿನ ಅಭಿಮಾನದಿಂದ ಊರು ಇಂದಿಗೂ ಇವರ ಮನೆಯವರನ್ನ ಮೂಲೀಗಾರ್ರು ಅನ್ನುತ್ತಾಬಂದರೆ, ಈ ಜೋಗಯ್ಯನವರಿಗೆ ಆ ಮೂಲೀತನದ ಅಡಮಾನದ ಮೇಲೆ ಐವತ್ತು ಸಾವಿರ ಸಾಲ ಕೊಡಿಸಬೇಕಂತೆ! ಹ್ಹಹ್ಹ ಹ್ಹಾ! ಎಂಥೆಂಥಾ ರಸಿಕರಿದ್ದೀರಯ್ಯಾ ನೀವೆಲ್ಲ!

ಜೋಗಯ್ಯ:— ನಮಗೆ ಸಲ್ಲದ ಆ ಹೆಸರಿಂದ ಊರು ನಮ್ಮನ್ನ ಕರೆಯಬಾರದೂಂತ ನಾವು ಅವರ ಕಣ್ಣು ತೆರೆಯೋದಕ್ಕೆ ಹೇಳುವ ಮಾತು. ಅದರಲ್ಲಿ ಸ್ವಾರಸ್ಯವೇನೂ ಇಲ್ಲ. ಪರಂಪರೆಯಿಂದ ಬಂದ, ಆದರೆ ನಮಗೆ ಸಲ್ಲದ, ಆ ಹೆಸರುಗಳನ್ನ ವ್ಯವಹಾರದಲ್ಲಳಿಸಿ ದುಡ್ಡು

ಕಾಸು ಮಾಡೋದಿಲ್ಲ! ನಾವು ಅವರ ಹಾಗೆ ಮಾಡುವ ರಸಿಕ ಶಿರೋಮಣಿಗಳಿದ್ದಾರೆ. ಏನಂತೀರಿ ಗೋಪಣ್ಣಯ್ಯ? ಅಲ್ಲವೇ ಶೆಟ್ರೇ? ಹ್ಹಹ್ಹಹ್ಹಾ!

ಗೋಪಯ್ಯ:— ಈಗ ಸಾರಸ್ಯ ಬಂತೂಂತೀನೆ! ಹ್ಹಹ್ಹಹ್ಹಾ!

ರಾ. ಸೆಟ್ರು:— ಜೋಗಯ್ಯನ ಮಾತೂಂದ್ರೆ ಮಾತ! ಹ್ಹಹ್ಹಹ್ಹಾ

ದಾ. ಶಾಸ್ತ್ರಿ:— ನೀವು ಇಷ್ಟೆಲ್ಲಾ ನಗಲಿಕ್ಕೆ ಜೋಗಯ್ಯನ ಮಾತಿನಲ್ಲಿ ಏನು ಸ್ವಾರಸ್ಯವಿದೆ?

ಗೋಪಯ್ಯ:— ಅದು ನಿಮಗೆ ತೋರದೂಂತೀನೆ! ಹ್ಹಹ್ಹಹ್ಹಾ! ಜೋಗಯ್ಯಾ, ಶಾಸ್ತ್ರಿಗಳಿಗೆ ನಿನ್ನ ಮಾತಿನ ಸ್ವಾರಸ್ಯ ಹೊಳೀಲಿಲ್ಲ. ಸ್ವಲ್ಪ ವಿವರಿಸಿ ಬಿಡೂಂದ್ರೆ!

ಜೋಗಯ್ಯ:— ನೋಡಿ ಶಾಸ್ತ್ರಿಗಳೇ. ನಮ್ಮ ಗೋಪಯ್ಯನಿಗ ಊರು ಪಂಡಿತಾಂದ್ರೂ ತನಗೆ ಪಂಡಿತ ಬರೋದಿಲ್ಲಾಂತ ಗೊತ್ತು ಅವರಿಗೆ. ಗೊತ್ತಿಲ್ಲದ್ದನ್ನ ಗೊತ್ತುಂಟೂಂತ ನಟಿಸಿ ಪಂಡಿತಗಿರಿ ಮಾಡ್ಬೇಕೂಂತ್ಲೂ ಇಲ್ಲ ಅವರಿಗೆ. ಆ ಅಭಿಮಾನದ ಹೆಸರೂ ಬೇಕಾಗಿಲ್ಲಾಂತ ತೋರಿಸೋಕೇ 'ಪಂಡಿತರೆ' ಅಂತ ಕರೆದವರಿಗೆ 'ಮದ್ದು ಕೊಡ್ತಾಂತ' ಕೇಳೋದು ಅವರು. ಹಾಗೆ ನಮ್ಮ ರಾಮಣ್ಣಾ ಸೆಟ್ರು. ತಮ್ಮಲ್ಲಿಲ್ಲದ ಪಟೇಲ್ಕಿಯ ಸ್ಥಾನಮಾನಕ್ಕೆ ಅವರು ಬಾಯಿ ಕಳೆಯೋದಿಲ್ಲ ಅಂತೇ ನಾನು! ಏನೋ ಪೂರಾ ಹತ್ತು ರೂಪಾಯಿ ತೀರ್ವೆಸೂ ಕೊಡದ ನನಗೆ ಆ ದೊಡ್ಡ 'ಮೂಲಿಗಾರ್ರು' ಎಂಬ ಹೆಸರು ಯಾಕಯ್ಯಾ! ನಮ್ಮನ್ನೆಲ್ಲ ಆಯಾ ಮನೆತನದ ಹೆಸರಲ್ಲಿ ಕರೆದಾಗ ನಾವು ಹಿಗ್ಗೋ ಬದಲಿಗೆ ಕುಗ್ಗುತ್ತೀವೆ. ನಮ್ಮ ಪೂರ್ವಜರ ಖ್ಯಾತೀನ್ನ ಎತ್ತಿ ನಮ್ಮನ್ನ ಗೇಲಿ ಮಾಡಿದಹಾಗೆ ಆಗುತ್ತೆ-ಎದೆಗೆ ತಿವಿದಂತಾಗುತ್ತೇ-ಪಂಡಿತ್ರೇ, ಪಟೇಲ್ರೇ, ಮೂಲಿಗಾರ್ರೇ ಅಂತ ಕರೆದಾಗ! ಆದರೆ ನಿಮ್ಮ ರೀತಿಯೇ ಬೇರೆ. ನೋಡಿ, ನೀವೀಗ ಶಾಸ್ತ್ರಿಗಳು. ಹಾಗೆ ಕರೆಯದಿದ್ದರೆ ನಿಮಗೆ ಸಿಟ್ಟೂ ಬಂದೀತು. ಆದರೆ ನಾವು ನಿಮ್ಮನ್ನ ಬಾಲ್ಯದಿಂದ್ಲೂ ತಿಳಿದವರು. ನಮ್ಮೊಟ್ಟಿಗೇ ನೀವೂ ಮೂರನೇ ಕ್ಲಾಸಿನಲ್ಲೇ ಶಾಲೆಗೆ ಶರಣುಹೊಡ್ದು ತಂದೆ ಹಿಂದೆ ದಾನ ದಕ್ಷಿಣೆಗೆ ತಿರುಗ ಹತ್ತಿದೋರು. ನಿಮಗೇನು ಸಂಸ್ಕೃತ ಭಾಷಾ ಪಾಂಡಿತ್ಯ ಉಂಟು? ನೀವೇನು ವೇದವೇದಾಂಗ ವೇದಾಂತ ಉಪನಿಷತ್ತು ಮೀಮಾಂಸಾದಿ ಶಾಸ್ತ್ರ ವಿಚಾರದಲ್ಲಿ ನುರಿತಿದ್ದೀರಾ? ಹಾಗೆ ಶಾಸ್ತ್ರಾಭ್ಯಾಸ ಮಾಡದ ನೀವು ಶಾಸ್ತ್ರಿಗಳಾಗೋದು ಹ್ಯಾಗಪ್ಪ? ನಿಮ್ಮ ಪೂರ್ವಿಕರು ಯಾರೋ ನಿಜವಾಗಿಯೂ ಮಹಾಶಾಸ್ತ್ರಿಗಳಾಗಿದ್ದರು. ಆ ಅಭಿಮಾನದ ಹೆಸರು ಪರಂಪರೆಯಿಂದ ನಿಮಗೂ ಬಂದಿದೆ. ಗೋಪಯ್ಯ ಪಂಡಿತರು, ರಾಮಣ್ಣಾ ಸೆಟ್ರು ಪಟೇಲ್ರು, ನಾನು ಮೂಲಿಗಾರ ಎಂಬೋದಕ್ಕೆ ಎಷ್ಟು ಮೌಲ್ಯ ಇದೆಯೋ ಅಷ್ಟೇ ನೀವು ಶಾಸ್ತ್ರಿಗಳಂಬೋದಕ್ಕೂ ಬೆಲೆಯಿರೋದು. ಇನ್ನು ನಿಮ್ಮಲ್ಲಿ ನಿತ್ಯಾನುಷ್ಠಾನ ಜಪ ತಪಗಳುಂಟು ಎನ್ನೋಣವೆ? ಈಗ ಜಾವಹೊತ್ತು ಮೀರದೆ, ಸ್ನಾನವಿಲ್ಲ, ಸಂಧ್ಯಾವಂದನೆಯಿಲ್ಲ, ಹೊಗೆಸೊಪ್ಪು ತುರುಕುತ್ತಿದ್ದೀರಿ ಬಾಯೊಳಗೆ! ಆದರೂ ನೀವು ಶಾಸ್ತ್ರಿಗಳೂಂತ ಹೇಳಿಕೊಂಡು ನಿಮ್ಮ ಶಾಸ್ತ್ರೀತನದ ಕೊಟ್ಟೇ ನಾಣ್ಯಾನ ಕುರುಡುಮುಂದಿ ಸಂತೇಲಿ ಚಲಾಯಿಸಿ ಧರ್ಮದೂಟ, ದಾನ ದಕ್ಷಿಣೆ, ಅಕ್ಕಿ ರೊಕ್ಕ ಹೊಡೀತೀರಲ್ಲ! ಅದರಲ್ಲಿದೆ ಸ್ವಾರಸ್ಯ!

ರಾ. ಸೆಟ್ರು:— ಏನಾದ್ರೂ ನ ಒಳ್ಳೆ ಮಂತ್ರ ಉರುಹಾಕಿಕೊಂಡಿದ್ದಾರಲ್ಲ?

ಗೋಪಯ್ಯ:— ಅದೇನು ಮಹಾ? ಗ್ರಾಮೋಫೋನ್ ಹೇಳ್ತೆ! ಇವರನ್ನೋದಕ್ಕಿಂತ ಸ್ಪಷ್ಟವಾಗಿ! ಸಲಕ್ಷಣವಾಗಿ! ಇವರೂ ಒಂದು ಮಂತ್ರಕೂಗೋ ಯಂತ್ರ. ಅದೂ ಹೆಚ್ಚು ರಿಕಾರ್ಡ್ ಇಲ್ಲದ ಯಂತ್ರ! ಹ್ಹಹ್ಹಹ್ಹಾ! ನಮ್ಮ ಶಾಸ್ತ್ರಿಗಳಿಗೆ ಜೇಡಿಯವರನ್ನು ಅಳಿಯೋಕೆ ಚೆನ್ನಾಗಿ ಗೊತ್ತದೆ. ಆದರೆ ತನ್ನ ತೂಕ ಒರಕ ಎಷ್ಟೂಂತ ನೋಡಿಕೊಳ್ಳಲೇ ಇಲ್ಲ!

ಜೋಗಯ್ಯ:-- ಲೋಕವೇ ಹಾಗೆ! ಅಲ್ಲವೇ ಶಾಸ್ತ್ರಿಗಳೇ?

ದಾ. ಶಾಸ್ತ್ರಿ:— ಹ್ಹಹ್ಹಹ್ಹಾ! (ದೇಶಾವರದ ನಗೆ) ಹ್ಹಹ್ಹಹ್ಹಾ! ನೀವು ಒಟ್ಟುಕೂಡಿದರೆ ಏನಾದರೊಂದು ನಕಲಿ ಉಂಟೇ ಉಂಟು! ಅದಕ್ಕೇ ರಸಿಕರಕೂಟ ಕೂಡಿತೂಂದೆ! ಆ ಹಾಳುರಗಳೆ ಪಂಚಾಯಿತಿಕೆ ಬಿಡಿ! ವೀಳ್ಯಹಾಕಿ!

— 'ವಿಚಾರಪ್ರಿಯ'.

---

[ ಕೊನೆಯ ದೃಶ್ಯ ]

# PRESERVE YOUR LIFE INSURANCE:

## FOR IT BEGINS WHERE YOU GIVE UP

When you marry you take a contract on your hands to support and bring up a family. But, who knows you may have to give up that right in the midst of it. So many have had to do.

It is here that the Life Policy Comes in. It is the bond that helps you to fulfil the contract and keep your honour and your family in tact.

**It Begins where you give up:** It goes ahead and supports the Family, comes through the contract honourably and releases you. It also stands behind and protects your business obligations and your good name.

THIS IS LIFE INSURANCE AND IT IS THE ONLY BOND THAT WILL DO IT

**HAVE THAT POLICY BOND**

IN

# THE LAKSHMI INSURANCE COMPANY LIMITED.

**Head Office: LAHORE.**

For Agency Particulars Please apply to:

**THE BRANCH MANAGER.**
334, THAMBUCHETTY ST.
G. T. MADRAS.



OR



**A. B. KRISHNA RAJ.**
ORGANISER
Ramakrishna Bldgs.,
UDIPI.

# ದಿ ಲಕ್ಷ್ಮೀ ಇನ್‌ಶೂರೆನ್ಸ್ ಕಂಪೆನಿ, ಲಿಮಿಟೆಡ್,
## ಲಾಹೋರ್.

ಕಳೆದ ಎಪ್ರಿಲ್ ೩೦, ೧೯೩೮ಕ್ಕೆ ಅಂತ್ಯವಾಗುವ ವರ್ಷದ "ಲಕ್ಷ್ಮೀ" ಕಂಪೆನಿಯ ಲೆಕ್ಕಾಚಾರಗಳೂ, ಡೈರೆಕ್ಟರರ ೧೪ನೇ ವರದಿಯೂ ನಮ್ಮ ಕೈ ಸೇರಿವೆ. ಇದನ್ನು ಪರಿಶೀಲಿಸಿದರೆ, ಈ ಕಂಪೆನಿಯು ತನ್ನ ಅವ್ಯಾಹತವಾದ ಪ್ರಗತಿ ಪಥದಲ್ಲಿ, ಈ ವರ್ಷ, ಮತ್ತೊಂದಡಿಯನ್ನು ಮುಂದಿಟ್ಟಿದೆಯೆಂದು ಒಪ್ಪಬೇಕಾಗುವುದು. ಮೊತ್ತ ಮೊದಲಿಂದಲೂ "ಲಕ್ಷ್ಮೀ" ವಿಮಾ ಕಂಪೆನಿಯ ಸ್ಥಾನವು, ಎಲ್ಲ ವಿಚಾರಗಳಲ್ಲೂ, ಭಾರತೀಯ ವಿಮಾ ಪ್ರಪಂಚದಲ್ಲಿ ಅತ್ಯುನ್ನತವಾಗಿಯೇ ಇದೆ. ಕಳೆದ ವರ್ಷವೂ, ಖರ್ಚಿನ ದಾಮಾಶಯದ ವಿಚಾರದಲ್ಲಾಗಲಿ, ಪ್ರಿಮಿಯಂ ಉತ್ಪತ್ತಿಯ ದೃಷ್ಟಿಯಲ್ಲಾಗಲಿ, ನೂತನ ವ್ಯವಹಾರದ ಭಾಗದಲ್ಲಾಗಲಿ, ಕಂಪೆನಿಯು ಒಂದಿಷ್ಟೂ ಹಿಂದೆ ಬಿದ್ದಿಲ್ಲ.

ಕಳೆದ ವರ್ಷದಲ್ಲಿ ೧,೯೧,೨೧,೬೨೪ ರೂಪಾಯಿಗಳ ವಿಮೆಯನ್ನು ಬೇಡುವ ೧೦, ೩೬೫ ಪ್ರೊಪೋಸಲ್ ಪತ್ರಗಳು ಕಂಪೆನಿಗೆ ದೊರೆತಿದ್ದು, ಅವುಗಳಲ್ಲಿ ೧,೬೧,೧೩,೭೭೫ ರೂಪ್ಯಾಗಳಿಗೆ ೭೮೯ ವಿಮಾ ಪತ್ರಗಳು ಕೊಡಲ್ಪಟ್ಟವು. ಈ ಭಾಗದಲ್ಲಿ ಹಿಂದಿನ ವರ್ಷಕ್ಕಿಂತ ರೂಪಾಯಿ ೧೦,೦೧,೯೨ ರಷ್ಟು ವ್ಯವಹಾರವು ಅಭಿವೃದ್ಧಿ ಹೊಂದಿವೆ. ಪ್ರಿಮಿಯಂ ಆದಾಯವು ರೂ. ೩೨,೦೧,೩೫೯. ಇದರೆದುರು-೧೧,೦೫,೬೮೬ ಖರ್ಚು ಈ ಖರ್ಚು ಆದಾಯದ ಸೇಕಡಾ ೩೪ ಆಗಿದ್ದು ಹಿಂದಿನ ವರ್ಷದ ಖರ್ಚಿನ ದಾಮಾಶಯಕ್ಕಿಂತ ಸೇಕಡಾ ೧.೩ ಕಡಿಮೆಯಿರುವುದು ಕಂಪೆನಿಯ ಮಿತವ್ಯಯದ ನಿದರ್ಶಕವಾಗಿದೆ.

ಪರಿಶೀಲನೆಗೊಳಗಾದ ಈ ವರ್ಷದಲ್ಲಿ ಮರಣದಿಂದಾಗಿ ರೂ. ೪,೪೪,೫೨೬ ಅವಧಿಯಿಂದಾಗಿ ರೂ. ೧,೯೬,೭೮೯ ರಷ್ಟು, ಹೀಗೆ ರೂ. ೬,೪೧,೩೧೫ರ ಸಂದಾಯದ ಬೇಡಿಕೆ (claims)ಗಳು ಬಂದಿದ್ದುವು. ಮರಣದ ಬೇಡಿಕೆಗಳಲ್ಲಿ ರೂ. ೪,೦೩,೦೪೭ ಈಗಾಗಲೆ ಸಂದಾಯವಾಗಿರುವುದರಿಂದ ಕಂಪೆನಿಯ ವಿಮಾ ಪತ್ರಗಳ ಸಂದಾಯದ ವಿಷಯವಾಗಿ ಎಷ್ಟೊಂದು ಶೀಘ್ರತೆಯನ್ನು ತೋರಿಸುತ್ತದೆಯೆಂಬುದು ವ್ಯಕ್ತವಾಗುತ್ತದೆ.

ಇನ್ನು ಕಂಪೆನಿಯ ಸ್ವತ್ತು-ಆಸ್ತಿಗಳ ವಿಚಾರ:-ಕಂಪೆನಿಯ ಜೀವ ನಿಧಿ (Life fund)ಯು ಒಂದು ಕೋಟಿಗೂ ಮಿಕ್ಕಿದೆ. ತನ್ನ ಉತ್ಪತ್ತಿಯ ಹದಿನಾಲ್ಕೇ ವರ್ಷದಲ್ಲಿ ಇಷ್ಟೊಂದು ದೊಡ್ಡ ಜೀವನಿಧಿಯನ್ನು ಬೆಳೆಸಿಟ್ಟ ಈ ಕಂಪೆನಿಯ ಸಾಹಸವು ವಿಮಾಪ್ರಪಂಚದಲ್ಲೇ ಅಪೂರ್ವವಾದುದು. ತನ್ನ ಒಟ್ಟು ೧,೧೩,೫೭,೬೧೫ ರೂಪಾಯಿಗಳ ಸ್ವತ್ತು-ಆಸ್ತಿಗಳಲ್ಲಿ----ರೂಪಾಯಿ ೩೭,೦೦,೪೩೨ ಸರಕಾರಿ ಮತ್ತು ದೇಶೀಯ ರಾಜ್ಯಗಳ ಪತ್ರಗಳ ಮೇಲೂ, ರೂ. ೨೮,೬೦,೬೪೮, ಸ್ಥಿರಾಸ್ತಿಗಳ ಈಡಿನ ಮೇಲೂ, ರೂ. ೧,೫೪,೫೧೩ ರಿಜರ್ವ ಬೇಂಕಿನ ಮತ್ತು ರೈಲ್ವೆಗಳ ಪಾಲುಗಳ ಮೇಲೂ ಹಾಕಲ್ಪಟ್ಟಿವೆ.

ಒಟ್ಟಿನ ಮೇಲೆ ಹೇಳುವುದಿದ್ದರೆ ಲಕ್ಷ್ಮೀ ವಿಮಾ ಕಂಪೆನಿಯು ವರ್ಷೇ ವರ್ಷೇ ಜೀವ ವಿಮಾಕ್ಷೇತ್ರದಲ್ಲಿ ವಿಶೇಷವಾದ ಉನ್ನತಿಯನ್ನು ಸಾಧಿಸುತ್ತಾ ಬರುತ್ತದೆ. ಎಲ್ಲ ರೀತಿಗಳಲ್ಲಿಯೂ ಲಕ್ಷ್ಮೀ ಸಂಸ್ಥೆಯು ವಿಮಾದಾರರ ಸಂಪೂರ್ಣ ವಿಶ್ವಾಸಕ್ಕೆ ಅರ್ಹವಾಗಿದ್ದು, ಅತ್ಯಂತ ಬಲಿಷ್ಠವಾದ ಭಾರತೀಯ ಕಂಪೆನಿಗಳಲ್ಲೊಂದಾಗಿ ಬೆಳೆಯುತ್ತಿರುವುದು ಸಂತೋಷಕರ.

---

(೧೩ನೆ ಪುಟದಿಂದ)

ಬಹುದು. ಆಕೆಯ ಜೀವನದಲ್ಲಿ ಒಡನಾಟವನ್ನು ಬೆಳೆಸಲು ಸಹಾಯಕಾರಿಯಾಗಿರುವ ಕಲೆಯು ನಿಮ್ಮಲ್ಲಿಲ್ಲದಿದ್ದರೆ ನೀವೀ ಯೋಚನೆಯನ್ನೇ ಮಾಡಬೇಕಾಗಿಲ್ಲ. ಆಕೆಯನ್ನು ವರಿಸಲು ಹಾತೊರೆಯುತ್ತಿರುವ ಸಿರಿವಂತ ತರುಣರು ಸಹಸ್ರಗಟ್ಟಲೆಯಲ್ಲಿರಬಹುದು. ತುಂಟತನವನ್ನು ಹೊರಸೂಸುವ ಆ ಕಣ್ಣಾಲಿ, ಹೃದಯವನ್ನು ಸೂರೆಗೊಳ್ಳುವ ಆ ಕೋಕಿಲ ಕಂಠದ ಮಧುರ ಮಾತುಗಳ ಸೊಬಗು, ಹಸುಳೆಯಂಥ ವರ್ತನೆ, ಇವೆಲ್ಲವುಗಳಿಂದ ಕೂಡಿದ ಶಾಂತಾ ಆಪ್ಟೆಯನ್ನು ವರಿಸುವ ಭಾಗ್ಯವು ನಿಮಗಿಲ್ಲದಿರಬಹುದೆಂದು ನನ್ನೂಹೆ. ಆದರೂ ನೀವು ಈ ಕುರಿತು ಆಕೆಯೊಡನೆ ಕೇಳದೆ ಅವಳ ಅಣ್ಣ ಶ್ರೀ. ಬಾಬುರಾವ್ ಆಪ್ಟೆಯೊಂದಿಗೆ ಕೇಳಿ ತಿಳಿಯಿರಿ.

# ಸ್ವೀಕಾರ - ವಿಮರ್ಶೆ

## ಶರಣ ಸಾಹಿತ್ಯ

ಈ ಉಪಯುಕ್ತ ಮಾಸಪತ್ರಿಕೆಯು ಶ್ರೀ. ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಸಂಪಾದಕತ್ವದಲ್ಲಿ ಬೆಂಗಳೂರು ನಗರದಿಂದ ಪ್ರಕಟವಾಗುತ್ತಿದೆ. ಸುಪ್ರಸಿದ್ಧರಾದ ಹಲವು ಕನ್ನಡ ಸಾಹಿತಿಗಳ ಲೇಖನಗಳು ಇದರಲ್ಲಿ ಹೆಚ್ಚಾಗಿ ಪ್ರಕಟವಾಗುತ್ತಿರುವುದರಿಂದ ಪತ್ರಿಕೆಯು ಬೋಧಪ್ರದ ವಿಷಯಗಳಿಂದ ಕೂಡಿರುತ್ತದೆಂದು ವ್ಯಕ್ತವಾಗುತ್ತದೆ. ಡೆಮಿ ಅಷ್ಟಮಾಕಾರದ ೬೪ ಪುಟಗಳುಳ್ಳ ಈ ಉದಾತ್ತ ಧ್ಯೇಯದ ಪತ್ರಿಕೆಯು ಕನ್ನಡಿಗರ ಬೆಂಬಲವನ್ನು ಪಡೆದು ಕರ್ನಾಟಕ ಸಂಸ್ಕೃತಿಯನ್ನು ಬೆಳಗಿಸುತ್ತಿರಲೆಂದೇ ನಮ್ಮ ಹಾರೈಕೆ. ಇದರ ವಾ. ಚಂದಾ ರೂ. ೩-೮-೦.

## ಪ್ರಪಂಚದ ಭವಿಷ್ಯ

ಪ್ರಪಂಚದ ವಿದ್ಯಮಾನಗಳು ಮುಂದೆ ಹೇಗಾಗಬಹುದೆಂಬುದನ್ನು ಈಗಲೇ ತಿಳಿಯುವ ಅಪೇಕ್ಷೆಯುಳ್ಳವರು ಬೆಂಗಳೂರಿನ ಸುಪ್ರಸಿದ್ಧ ಜ್ಯೋತಿಷಿಗಳೂ ಜ್ಯೋತಿಷ್ಯ ಪತ್ರಿಕೆಯ ಸಂಪಾದಕರೂ ಆದ ಶ್ರೀ. ಬಿ. ವಿ. ರಾಮನ್‌ರವರ "World Prospects" ಎಂಬ ಇಂಗ್ಲಿಷ್ ಪುಸ್ತಕದ ಈ ಕನ್ನಡ ಭಾಷಾಂತರವನ್ನು ಅವಶ್ಯವಾಗಿ ಓದಬೇಕಾಗಿದೆ. ಇವರು ಹಿಂದೆ ಹೇಳಿದ ಕೆಲವು ಭವಿಷ್ಯಗಳು ಸತ್ಯವಾಗಿರುವುದರಿಂದ ಈ ಪುಸ್ತಕದಲ್ಲಿರುವ ಭವಿಷ್ಯಗಳನ್ನು ನಂಬಲೆಡೆಯಿದೆ. ಮುಂದಿನ ಯುದ್ಧ ಪ್ರಪಂಚದ ರಾಷ್ಟ್ರಗಳ ಭವಿಷ್ಯ, ಮುಂತಾದುವುಗಳು ಇದರಲ್ಲಿರುವುದರಿಂದ ಈ ಪುಸ್ತಕವು ಅವಲೋಕನಾರ್ಹವಾಗಿದೆ. ಇದರ ಪ್ರಕಾಶಕರು ಬೆಂಗಳೂರು ಯಸ್. ಜಿ. ಯನ್. ಪ್ರೆಸ್ಸಿನ ಶ್ರೀ. ಬಿ. ಶಿವಪ್ಪನವರು, ಕ್ರಯ: ೪ ಆಣೆ.

## ಜೀವನ ಪ್ರಭಾತ

ವಿಮಾ ವಿಚಾರಗಳಿಗೆ ಮೀಸಲಾಗಿರಿಸಿರುವ 'ವಿಮಾ ವಾಣಿಜ್ಯ' ಪತ್ರಿಕೆಯಲ್ಲಿ ಪ್ರಕಟವಾದ ವಿವಿಧ ಕವಿತೆಗಳನ್ನು ಸಂಗ್ರಹಿಸಿ, ಅದರ ವ್ಯವಸ್ಥಾಪಕ ಸಂಪಾದಕರಾದ ಶ್ರೀ. ಜೆ. ವಿ. ದೊಡ್ಡ ವೀರಪ್ಪನವರು 'ಜೀವನ ಪ್ರಭಾತ' ವೆಂಬೀ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕ್ರೌನ್ 1/8 ಆಕಾರದ ೮೨ ಪುಟಗಳಿವೆ.

ಇದರ ಮುನ್ನುಡಿಯಲ್ಲಿ ಶ್ರೀ. ಡಿ. ವಿ. ಗುಂಡಪ್ಪನವರು ಹೇಳಿರುವಂತೆ ಶ್ರೀ. ದೊಡ್ಡವೀರಪ್ಪನವರು ಕಾವ್ಯದ ಮೋಹಕ ಶಕ್ತಿಯನ್ನು ವಿಮಾ ಉದ್ಯಮಕ್ಕೆ ಸಂಪಾದಿಸಿಕೊಳ್ಳಬೇಕೆಂಬ ಪ್ರಯತ್ನವನ್ನು ಸಾಮಾನ್ಯ ಮಟ್ಟಿಗೆ ಯಶಸ್ವಿಯಾಗಿ ಮಾಡಿದ್ದಾರೆ. ಹಲವು ಮಂದಿ ತರುಣ ಕವಿಗಳ ಕವಿತೆಗಳು ಇದರಲ್ಲಿ ಸೇರಿಕೊಂಡಿವೆ. ಹೆಚ್ಚಿನವುಗಳು ವಿಮೆ, ಧನ, ವಿಜ್ಞಾನ ಇವೇ ಮೊದಲಾದುವುಗಳಿಗೆ ಸಂಬಂಧಪಟ್ಟವುಗಳಾಗಿವೆ. ಶ್ರೀ. ಪುಟ್ಟಪ್ಪನವರ 'ಭರತಮಾತೆ' ಶ್ರೀ. ಅಂಬಿಕಾತನಯದತ್ತರ 'ಕುರುಡು ಕಾಂಚಾಣ' ಇವೇ ಮೊದಲಾದ ಕವನಗಳಿರುವುದಲ್ಲದೆ ಈ ಪುಸ್ತಕದ ಮುದ್ರಣವು ಮನೋಹರವಾಗಿದೆ. ಮೈಗಟ್ಟು ಚೆನ್ನಾಗಿದೆ. ಹೊಸ ಕವಿತೆಗಳನ್ನೊಳಗೊಂಡ "ಜೀವನ ಪ್ರಭಾತ" ವು ಪ್ರೋತ್ಸಾಹನೀಯವಾಗಿದೆ.

## ತಿನಿಸು

ಎರಡು ತಿಂಗಳಿಗೊಮ್ಮೆ ಹೊರಡುವ ಭಾರತೀ ಗ್ರಂಥ ಮಾಲೆಯ ಎರಡನೆ ಮಣಿಯಿದು. ಶ್ರೀ. ಕೆ. ಬಿ. ಸೀತಾರಾಮ ಧೊರೆ ಬಲ್ಲಾಳರು ಇದರ "ನಿರ್ದೇಶಕರು" ಶ್ರೀ. ಯಂ. ಯಸ್. ಹೆಗ್ಡೆಯವರು ಈ ಗ್ರಂಥ ಮಾಲೆಯ ಸಂಪಾದಕರು. ಶ್ರೀ ವೈ. ರಾಮಕೃಷ್ಣ ಪುರಾಣಿಕರು ಕಟಪಾಡಿಯಿಂದ ಇದನ್ನು ಪ್ರಕಟಿಸುತ್ತಿದ್ದಾರೆ.

ಬಿಡಿ ಪ್ರತಿ ೦ ೪ ೦.

ವಾ. ಚಂ. ೧ ೮ ೦.

ಕ್ರೌನ್ ಅಷ್ಟಮಾಕಾರದ ೬೭ ಪುಟಗಳುಳ್ಳ ಈ ಪುಸ್ತಕದಲ್ಲಿ ಹಳ್ಳಿಗಳ ಕುರುಡು ಭಾವನೆಯ ಕುರಿತು ಬರೆದಿರುವ ಕೆಲವು ಕತೆಗಳೂ, ಹಲವು ಮಂದಿ ಹೊಸ ಕವಿಗಳ ಕವನಗಳೂ ಲೇಖನಗಳೂ ಸೇರಿಕೊಂಡಿವೆ. ಶ್ರೀ ಯಂ. ವಿ. ಹೆಗ್ಡೆಯವರು 'ಹಳ್ಳಿಗರ ಅಂಧಶ್ರದ್ಧೆ'ಯೆಂಬ ಲೇಖನದಲ್ಲಿ ಹಳ್ಳಿಗರ ಅಂಧಶ್ರದ್ಧೆಯನ್ನು ನಿವಾರಿಸುವ ಕುರಿತು ಬರೆಯುತ್ತಾ ಪ್ರತಿಯೊಂದು ಹಳ್ಳಿಯ ಜನರಿಗೆ ಜ್ಞಾನವನ್ನು ತುಂಬಲು ಅವಿಶ್ರಾಂತವಾಗಿ ದುಡಿಯುವ ಸಂಘಗಳು ಸ್ಥಾಪಿಸಲ್ಪಟ್ಟರೆ ದೈವ ದೇವರುಗಳ ಹಿಂಡು ಹಿಂಡನ್ನೇ ಗಡೀಪಾರು ಮಾಡಿ ಹಿಂದೂ ದೇಶದ ಮುಖ್ಯಾಂಗವಾದ ಹಳ್ಳಿಯನ್ನುದ್ಧರಿಸಬಹುದೆಂದು ಹೇಳಿದ್ದಾರೆ.

ಪುಸ್ತಕದ ಮುದ್ರಣ ಮತ್ತು ಮೈಗಟ್ಟು ಸೊಗಸಾಗಿದೆ. ವಿಷಯಗಳು ಹಳ್ಳಿಯ ಪರಿಸ್ಥಿತಿಯನ್ನು ಉತ್ತಮವಾಗಿ ಚಿತ್ರಿಸುತ್ತವೆ. ಕನ್ನಡಿಗರು ಪ್ರೋತ್ಸಾಹಿಸಬೇಕಾಗಿದೆ.

**ಮುರುಕು ವಿದ್ಯಾ-ಹರಕು ಸಂಸಾರ**

ಈ ಚಿಕ್ಕ ಪ್ರಹಸನವನ್ನು ಶ್ರೀ. ವಾಸುದೇವಾಚಾರ್ಯ ಬುರ್ಲಿಯವರು ಮನೆಮಾತಿನಲ್ಲಿ ಬರೆದಿದ್ದಾರೆ. ನಿಷ್ಪ್ರಯೋಜಕವಾದ ವಿದ್ಯಾಭ್ಯಾಸವನ್ನು ಪಡೆದ ಮಗ ಮತ್ತು ಅವನ ಹೆಂಡತಿಯರ ಅಸ್ವಾಭಾವಿಕ ಜೀವನ ಮತ್ತು ಹಳೆ ಸಂಪ್ರದಾಯದ ತಂದೆ ತಾಯಿಗಳ ಅಂಧಶ್ರದ್ಧೆಗಳಿಗಾಗುವ ಘರ್ಷಣೆಯನ್ನು ಇದರಲ್ಲಿ ಸುಂದರವಾಗಿ ಚಿತ್ರಿಸಲಾಗಿದೆ. ಸನಾತನ ಧರ್ಮಾಭಿಮಾನಿಯಾದ ವೆಂಕಣ್ಣಾಚಾರ್ಯರು ಸಾಲ ಮಾಡಿಯಾದರೂ ಶ್ರಾದ್ಧ ಮಾಡುತ್ತಾರೆ. ಚಿಕ್ಕಾಸಿಲ್ಲದ ಅವರ ಮಗ ಹೆಂಡತಿಯ ಹಣದಿಂದ ಸಿಗರೇಟು ಸೇದಿ ತನ್ನ ಶುಷ್ಕತೆಯನ್ನು ವ್ಯಕ್ತಪಡಿಸುತ್ತಾನೆ. ಇವೆಲ್ಲವುಗಳಿಂದ ಸಾಮಾನ್ಯ ಜನ ಜೀವನದಲ್ಲಿ ಅಜ್ಞಾನ ಮತ್ತು ದಾರಿದ್ರ್ಯಗಳು ಹೇಗೆ ಹೆಚ್ಚುತ್ತವೆಯೆಂದು ಇದನ್ನೋದಿದರೆ ಸ್ಪಷ್ಟವಾಗುತ್ತದೆ. ಸಮಾಜದ ಅಂಧಶ್ರದ್ಧೆಗಳನ್ನು, ಶುಷ್ಕಪದ್ಧತಿಗಳನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಿ ಬಯಲಿಗೆಳೆಯುವ ಇಂತಹ ಪ್ರಹಸನಗಳು ಸ್ವಾಗತಾರ್ಹವಾಗಿವೆ. ಇದನ್ನು ಪ್ರಕಟಿಸಿರುವ ಕನ್ನಡ ವಾಙ್ಮಯಪ್ರಕಾಶನ ಸಮಿತಿ, ಬಾಗಲಕೋಟೆ ಇವರನ್ನು ಅಭಿವಂದಿಸಬೇಕಾಗಿದೆ.

---

**ಸಂಯುಕ್ತ ರಾಜ್ಯಘಟನೆ**

(All India Federation.)

ಭಾರತೀಯ ನೂತನ ಸಂಯುಕ್ತ ರಾಜ್ಯಘಟನೆಯೆಂಬುದನ್ನು ಕನ್ನಡದಲ್ಲಿ ಬರೆದಿರುವ ಶ್ರೀ. ಶಿವರಾಯ ಭೋಜ ಪ್ರಭು ಪಾಟೀಲ ಮಾಸ್ತರ ಹಿರೇಬಾಗೇವಾಡಿ, ಬೆಳಗಾಂವ ಇವರು ಕನ್ನಡಿಗರ ಪ್ರಶಂಗೆಗೆ ಪಾತ್ರರಾಗಿದ್ದಾರೆ. ಪ್ರಾಂತಿಕ ಸ್ವಾಯತ್ತೆಯು ಜಾರಿಗೆ ಈಗಾಗಲೆ ಬಂದಿರುವುದು ಎಲ್ಲರಿಗೆತಿಳಿದಿರುವುದಿದ್ದರೆನವರಾಜ್ಯ ಘಟನೆಯ ಎರಡನೆ ಭಾಗವಾದ ಸಂಯುಕ್ತ ರಾಜ್ಯಘಟನೆಯ ವಿಚಾರವು ಪ್ರತಿಯೊಬ್ಬರಿಗೂ ತಿಳಿಯಬೇಕಾಗಿದೆ. ಶ್ರೀ. ಎಸ್. ಬಿ. ಪಾಟೀಲರು ಈ ಚಿಕ್ಕ ಪುಸ್ತಕದಲ್ಲಿ ಸಾಧ್ಯವಾದಷ್ಟುಮಟ್ಟಿಗೆ "ಫೆಡರೇಶನ್" ಎಂದರೇನೆಂಬುದನ್ನುನಿವರಿಸಿದ್ದಾರೆ. ಅಲ್ಲದೆ ವಿವಿಧ ಪತ್ರಿಕೆಗಳಲ್ಲಿ ಈ ಕುರಿತು ಪ್ರಕಟವಾದ ಭಾಷಣ ಮತ್ತು ಹೇಳಿಕೆಗಳನ್ನು ಇದರಲ್ಲಿ ಸಂಗ್ರಹಿಸಿದ್ದಾರೆ. ನಾಲ್ಕಾಣೆ ಕ್ರಯದ ಈ ಪುಸ್ತಕದಲ್ಲಿ ನಾಗರಿಕರು ತಿಳಿಯ ಬೇಕಾದ ಅನೇಕ ವಿಚಾರಗಳಿರುವುದರಿಂದ ಎಲ್ಲರಿಗೂ ಉಪಯುಕ್ತವಾಗಿದೆಯೆಂದು ಹೇಳಬಹುದಾಗಿದೆ.

---

**ಇಷ್ಟೋಪದೇಶ**

ಈ ಅಧ್ಯಾತ್ಮವಿಷಯಕ ಗ್ರಂಥವನ್ನು ಮೈಸೂರಿನ ಪ್ರಸಿದ್ಧ ವಿದ್ವಾಂಸರಾದ ಶ್ರೀಮಾನ್ ಎ. ಶಾಂತಿರಾಜ ಶಾಸ್ತ್ರಿಗಳವರು ಭಾವಾರ್ಥ ಮತ್ತು ವಿವರಣೆಗಳೊಂದಿಗೆ ಬರೆದಿದ್ದಾರೆ. ಜೈನ ಸಮಾಜಕ್ಕೆ ಪರಮಪೂಜ್ಯರೆನಿಸಿರುವ ಪೂಜ್ಯಪಾದಾಚಾರ್ಯರು ಇದನ್ನು ಸಂಸ್ಕೃತದಲ್ಲಿ ಬರೆದರೆಂದೂ, ಅವರು ಅಸಾಧಾರಣ ವಿದ್ವಾಂಸರಾಗಿದ್ದರೆಂದೂ ಶ್ರೀ. ಶಾಸ್ತ್ರಿಗಳು ಮುನ್ನುಡಿಯಲ್ಲಿ ಹೇಳಿದ್ದಾರೆ. ಇದರಲ್ಲಿ ಉಪಯುಕ್ತವಾದ ಹಲವು ವಿಚಾರಗಳು ಸರಳ ಕನ್ನಡದಲ್ಲಿ ಹೇಳಲ್ಪಟ್ಟಿರುವುದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಪಣಪಿಲ ಅರಮನೆಯ ಶ್ರೀ. ಶ್ರೀಪರ್ಮ ಶೆಟ್ಟಿ ಮತ್ತು ಅವರ ಧರ್ಮ ಪತ್ನಿಯರಾದ ಶ್ರೀಮತಿ ದೇಜಮ್ಮನವರು ಶಾಸ್ತ್ರದಾನಕ್ಕಾಗಿ ಈ ಗ್ರಂಥವನ್ನು ಅರಿಸಿರುವುದು ಸ್ತುತ್ಯವಾಗಿದೆ.

---

**ಮದಾಲಸೋಪಾಖ್ಯಾನ**

ಈ ಪದ್ಯಕಾವ್ಯವನ್ನು ಅಭಿನವ ಕಾಳಿದಾಸ ಕುಮಾರ ಮಾಧವ ಪೌರಾಣಿಕ ಸಾಲಿಗ್ರಾಮ ಶ್ರೀಕಂಠ ಶಾಸ್ತ್ರಿಗಳು ರಚಿಸಿದ್ದಾರೆ. ವಿಷ್ಣು ಪುರಾಣದಲ್ಲಿರುವ "ಮದಾಲಸೆ" ಯೆಂಬ ಕತೆಯ ಆಧಾರದಿಂದ ಈ ಪದ್ಯಕಾವ್ಯವನ್ನು ರಚಿಸಲಾಗಿದೆ. ಈ ಕಾವ್ಯದಲ್ಲಿ ಅನೇಕ ಉಪಯುಕ್ತ ವಿಷಯಗಳು ಹೇಳಲ್ಪಟ್ಟಿರುವುದಲ್ಲದೆ ಭಕ್ತಿಯ ಮಹಾತ್ಮೆಯನ್ನು ಇದರಲ್ಲಿ ಸೊಗಸಾಗಿ ವರ್ಣಿಸಲಾಗಿದೆ. ರಾಣಿ ಮದಾಲಸೆಯು ತನ್ನ ಮಗನಿಗೆ ಕೊಡುವ ಬೋಧನೆಯು ತರುಣರಿಗೆ ಬಹಳ ಉಪಯುಕ್ತವಾಗಿದೆ. ಶ್ರೀ. ಶಾಸ್ತ್ರಿಗಳ ಶೈಲಿಯು ಸರಳವಾಗಿಯೂ ಗಂಭೀರವಾಗಿಯೂ ಇರುವುದರಿಂದ ವಾರ್ಧಕ ಷಟ್ಪದಿಯಲ್ಲಿ ಬರೆದಿರುವ ಈ ಪದ್ಯ ಕಾವ್ಯವನ್ನು ಎಲ್ಲರೂ ಓದಬಹುದಾಗಿದೆ. ಹಲವೆಡೆಗಳಲ್ಲಿ ಕಾವ್ಯದ ಸೊಬಗು ಎದ್ದು ಕಾಣುತ್ತಿದೆ.

---

## ಅಂತರಂಗ ಸ್ಪರ್ಧೆಯ ಉತ್ತರಗಳನ್ನು ಬರೆದು ಕಳುಹಿಸುವ ಕೂಪನುಗಳು.




### ಅಂತರಂಗ ಸ್ಪರ್ಧೆ—ನಂ. ೧.

ಹೆಸರು . . . . . . . . . . .

. . . . . . . . . . .

. . . . . . . . . . .

ವಿಳಾಸ . . . . . . . . . .

. . . . . . . . . . .

. . . . . . . . . . .

ಸಹಿ. . . . . . . . . . .

ಉತ್ತರಗಳ ಸಂಖ್ಯೆ . . . . . . .

ಕಳುಹಿಸಿದ ಹಣವೆಷ್ಟು . . . . . .

**ವಿ. ಸೂ:** ಉತ್ತರಗಳನ್ನು ಬರೆಯುವಾಗ ಸ್ಪಷ್ಟವಾಗಿ ಬರೆಯಬೇಕು. ಪ್ರತಿಯೊಂದು ಉತ್ತರವೂ ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.



# ಈ ವಾರದ ಪಂಚಾಂಗ



**ಬಹುಧಾನ್ಯ ಸಂ|ರದ ಮಾರ್ಗಶಿರ ಶುಕ್ಲಪಕ್ಷ ದಕ್ಷಿಣಾಯನಂ ಹೇಮಂತಋತುಃ**

ವೃಶ್ಚಿಕ ೧೧ರಿಂದ ವೃಶ್ಚಿಕ ೧೭ರ ವರೆಗೆ. ಮಹಾನಕ್ಷತ್ರ ಅನುರಾಧಾ-ಜ್ಯೇಷ್ಠಾ.

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 27 | ೫ | ರ೨೦\|\| | ಉಷಾ೧೩\|\|\| | ವೃ೩೮\|\| | ಬಾ೨೦\|\| | ೨೪\|\|\| | ೫೧\| | ನಿ೩ತುಲಾವಶು೬ ಸ್ಕಂದಷಿ |
| 28 | ೬ | ಚ೨೫\|\|\| | ಶ್ರ೨೦ | ಧೃ೩೯\|\| | ತೈ೨೫\|\| | ೩೦\|\|\| | ೫೬\| | ಕುಂಭೇಚ೫೩ಮೂ೨ಬು೦ ಸುಬ್ರ.೬ |
| 29 | ೭ | ಕು೩೦ | ಧ೨೫\|\|\| | ವ್ಯಾ೪೦ | ವ೩.೦ | ೪೫\| | ಶೆ೧\| | ಅ್ನ೪ರ೧೭ ನಾಶಯೋಗ ಧನಿ. |
| 30 | ೮ | ಬು೩೩\|\|\| | ಶ್ರ೩೦\|\| | ಹರ್೪೦ | ಭ೨\| | ೪೭\|\|\| | ೧೧\| | ಚಿ೩ತುಲಾಕು೩೨ |
| 1 | ೯ | ಗು೩೬\| | ಪೂಭಾ೩೪\|\| | ವ೩೮\|\|\| | ಬಾ೫\| | ೫೯\|\|\| | ೧೩\| | ಮೀನೆಚ೧೮\|\| |
| 2 | ೧೦ | ಶು೩೭\| | ಉಭಾ೩೬ | ಸಿ೩೬\|\|\| | ತೈ೭ | ೬೩\|\|\| | ೨೪\|\|\| | ಜ್ಯೇಷ್ಠಾರ್ಕ:೩೨\|\| ಅ. ಸಿ. ಯೊ. ರೇವ |
| 3 | ೧೧ | ಶ೩೭\| | ರೆ೩೮\|\| | ವ್ಯ೩೩\|\| | ವ೬\|\| | ೮ | ೩೨\|\| | ಮೇಷೆಚ೪೮\|\| ನಿ೧ರಾ ಭ೩ಕೆ೪೦ ಸರ್ವೈಕಾದಶೀ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 27 | ೫ | ರ೨೨\|\| | ಉಷಾ೧೫ | ವೃ೩೯\|\|\| | ಬಾ೨೨\|\| | ೬೬\| | ಶೆ೧\|\|ಅ ೫೩\| | ಮೂ೨ಬು೩೮ವಕ್ರಗತ್ಯಾ ತುಲಾ† |
| 28 | ೬ | ಚ೨೮\|\| | ಶ್ರ೨೬\| | ಧೃ೪೧\|\| | ತೈ೨೮\|\| | ೩೩\|\| | ೦ | ಕುಂಭೆಚ೫೫\|\|\| ಸುಬ್ರಹ್ಮಣ್ಯಷಷ್ಠೀ |
| 29 | ೭ | ಕು೩೯\|\| | ಧ೨೯\| | ವ್ಯಾ೪೩ | ಗ೧\|\| | ೪೯\| | \| | ಅ್ನ೪ರ೧೦ [†ಶುಕ್ರ:೪೭ |
| 30 | ೮ | ಬು:೩೯\| | ಶ್ರ೩೫\| | ಹರ್೪೩\|\| | ಭ೬\|\|\| | ೫೨\|\| | ೧೫\|\| | ತುಲಾಕುಜ:೪೪ |
| 1 | ೯ | ಗು೪೨\|\| | ಪೂಭಾ೩೯\|\|\| | ವೃ೪೩\| | ಬಾ೧೦\|\|\| | ೦ | ೧೮\| | ಮೀನೆಚ೨೫\|\|\| ದಶಂಬರ |
| 2 | ೧೦ | ಶು೪೩\|\|\| | ಉಭಾ೪೨\|\| | ಸಿ೪೧\| | ತೈ೧೩ | ೫ | ೩೦ | ಜ್ಯೇಷ್ಠಾರ್ಕ:೨೭\| |
| 3 | ೧೧ | ಶ೪೩ | ರೆ೪೩\| | ವ್ಯ೩೭\|\| | ವ೧೩\| | ೧೩ | ೩೭\| | ಮೇಷೇಚ೪೩\| ವ:೩೩ಬು೫೪ಗೀತಾ ಜಯಂತಿ ಸರ್ವೇಷಾಂ೧೧ |

# ಈ ವಾರದಲ್ಲಿ ನಿಮ್ಮ ಭವಿಷ್ಯವು ಹೇಗಿದೆ?

ತಾ. ೨೭-೧೧-'೩೮ರಿಂದ

ತಾ. ೩-೧೨-'೩೮ರ ವರೆಗೆ.

**ಮೇಷ:—**

ಇದೇನು ಕಾಲಗತಿಯೋ, ಗ್ರಹಗತಿಯೋ, ವಾ ಲೋಕನೀತಿಯೋ ಎಂದು ನೀವು ನಿಮ್ಮ ಮೂಗಿನ ಮೇಲೆ ಬೆರಳಿಡುವಿರಿ. ಅಂತಹ ಪ್ರಸಂಗ ಬಂದೊದಗಿದೆ ನಿಮಗೀ ವಾರದಲ್ಲಿ. ಆದೇಕೆಂಬಿರಾ? ನಿಮ್ಮ ರಾಶಿಗೆ ಸಮಸ್ತ ಗ್ರಹರ ಚಾರವು ಅಷ್ಟರ ಮಟ್ಟಿಗೆ ಬಂದು ನಿಂತಿದೆ. ಎಲ್ಲರೂ ಅನಿಷ್ಟ ಸ್ಥಾನವನ್ನೇ ಆಶ್ರಯಿಸಿರುವರು. ಏಕಾದಶಸ್ಥ ಗುರುವಿನಿಂದ ದೇವತಾನುಗ್ರಹವು ಇದೆಯೆಂದು ಹೇಳಲಿಕ್ಕೂ ಸಾಧ್ಯವಿಲ್ಲ. ಕಾರಣ ಆತನು ಅಷ್ಟಮಸ್ತ ರವಿಯಿಂದ ವಿದ್ಧನಾದ ಪ್ರಯುಕ್ತ ವೇಧ ದೋಷದಿಂದಾಗಿ ಅನಿಷ್ಟಕಾರಕನೇ ಆಗಿರುವನು. ಅಂದ ಮೇಲೆ ಬೇರೆ ಹೇಳಬೇಕಾಗಿಲ್ಲ. ಯಾವ ವಿಷಯಕ್ಕೂ ಕೈ ಹಾಕದೆ ಮನೆಯೊಳಗೆನೇ ಕುಳಿತಿದ್ದರೂ ಕೂಡ ನೀವು ಈ ಅನಿಷ್ಟ ಪರಂಪರೆಗಳಿಂದ ಪಾರಾಗುವಂತಿಲ್ಲ. ಸ್ತ್ರೀ ಪೀಡೆಯು ವಿಶೇಷತಃ ಸ್ವಸ್ತ್ರೀ ಪೀಡೆಯು ಅಧಿಕವಾಗಿ, ರೋಗಭಾದೆಯೂ ಹೆಚ್ಚಿ ಶಾರೀರಕ ಮಾನಸಿಕ ಸುಖಗಳನ್ನಪಹರಿಸುವವು. ಸರ್ವ ವಿಷಯಗಳಲ್ಲೂ ಧನವ್ಯಯವು ಅಧಿಕವಾಗಿ ಕೈಕಟ್ಟಿ ಹೋಗುವುದು. ಅದರಲ್ಲೂ ತಾ. 2 ಮತ್ತು 3ರಲ್ಲಿ ನಿಮ್ಮ ಅವಸ್ಥೆಯು ಮಹಾಮಾ ಗೋಚವೆಂದರೆ ತಪ್ಪಾಗದು.

**ವೃಷಭ:—**

ಕಳೆದ ವಾರಕ್ಕಿಂತ ಎಷ್ಟೋ ಭಾಗಗಳಲ್ಲಿ ನಿಮಗೆ ಈ ವಾರವು ಉತ್ತಮವಾಗಿ ಕಂಡುಬರುವುದು. ಕಾರಣ ನಿಮ್ಮ ವ್ಯಾಪಾರ, ಇತರ ಉದ್ಯೋಗಾದಿಗಳಲ್ಲೂ ಅನೇಕ ತೊಡಕು ತೊಂದರೆಗಳುಂಟಾದರೂ ಅವನ್ನು ನಿವಾರಿಸಿಕೊಂಡು ಸಾಕಷ್ಟು ಮನಸ್ಸಿಗೆ ತೃಪ್ತಿಕರವಾಗುವಂತೆ ಕಾರ್ಯವನ್ನು ಕೊನೆಗಾಣಿಸುವ ಶಕ್ತಿ ನಿಮ್ಮಲ್ಲಿರುವುದು. ಆದರೂ ಆರೋಗ್ಯದ ಮಟ್ಟಿಗೆ ಈ ವಾರವು ಅಷ್ಟೊಂದು ಉತ್ತಮವೆನಿಸಿಲ್ಲವು. ಪ್ರಯಾಣ ಮತ್ತು ದೇಹದ ಸಲುವಾಗಿ ಸ್ವಲ್ಪಮಟ್ಟಿಗೆ ಧನವ್ಯಯವಾಗುವುದಾದರೂ ಅದಕ್ಕೆ ಬೇಕಾದಷ್ಟು ಹಣವನ್ನು ಸ್ವತಃ ದುಡಿಯುವಿರಿ. ಪುತ್ರಸಂತತಿ ಲಾಭದ ಯೋಗವಿದೆ. ತಾ. 27, 28ರಲ್ಲಿ ದೇಹಪೀಡೆಯಿಂದಲೂ ರಾಜಭಯದಿಂದಲೂ ಮನಸ್ಸಿಗೆ ನೆಮ್ಮದಿಯಿಲ್ಲದಿದ್ದರೂ ಆ ಮೇಲಿನ ದಿನಗಳಲ್ಲಿ ಅವೆಲ್ಲವೂ ನಿವೃತ್ತಿಹೊಂದಿ ಮನೋರಥವು ಈಡೇರುವುದು.

**ಮಿಥುನ:—**

ಶುಭಾಶುಭ ಫಲಗಳ ಮಿಶ್ರೀಭಾವದಿಂದ ನಿಮಗೀ ವಾರವು ಅಷ್ಟೊಂದು ಉತ್ತಮವು ಯಾ ಕೆಟ್ಟದು ಆಗಿ ತೋರಿಬರಲಾರದು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೂ ವಿದ್ಯೋಪಜೀವಿಗಳಾದ ಜನರಿಗೂ ಸ್ವಲ್ಪ ಹಾನಿಕರವಾಗಿರುವುದು. ಧನಧಾನ್ಯ ಗೃಹಸಂಪತ್ತೂ ಮಿತ್ರಬಲವೂ ನಿಮಗೆ ಚನ್ನಾಗಿರುವುದರಿಂದ ಶತ್ರುಗಳ ಹಂಚಿಕೆಯು ಏನೊಂದೂ ನಿಮ್ಮಲ್ಲಿ ನಡೆಯಲಾರದು. ಇತರ ಮನೋರೋಗಗಳು ನಿವೃತ್ತಿಹೊಂದಿದರೂ ಅಪತ್ಯಸಂಬಂಧವಾದ ಶೋಕವು ನಿಮ್ಮನ್ನು ಪೀಡಿಸಲಿದೆ. ಮನಸ್ಸು ಚಂಚಲವಾಗಿದ್ದು ಅಚಾತುರ್ಯದಿಂದಾಗಿ ಕೆಲವು ಕಾರ್ಯಗಳಲ್ಲಿ ಅಪವ್ಯಯವಾದೀತು. ಅಂತೂ ತಾ 27ರಿಂದ 1ರ ವರೆಗೂ ಅನಿಷ್ಟಗಳೇ ಹೆಚ್ಚಾಗಿ ಅನುಭವಕ್ಕೆ ಬಂದರೂ ನಂತರ ಸುಖವಿದೆ.

**ಕರ್ಕಾಟಕ:—**

ಯಾವ ಭಾಗ್ಯಗಳಿದ್ದರೂ ಮನುಷ್ಯರಿಗೆ ಆರೋಗ್ಯಭಾಗ್ಯವಿಲ್ಲದಲ್ಲಿ ಅವೆಲ್ಲವೂ ಕನ್ನಡಿಯೊಳಗಿನ ಗಂಟಿನಂತೆಯೇ ಸರಿ. ಯಾಕಂದರೆ ಹೆಚ್ಚಿನ ಕಾರ್ಯಗಳ

ಫಲಾನುಭವವು ದೇಹಕ್ಕೆಸಂಬಂಧಪಟ್ಟಿರುತ್ತದೆ. ಅಂದ ಮೇಲೆ ಆ ದೇಹವೇ ಸರಿಯಿಲ್ಲದಲ್ಲಿ ಆ ಫಲಗಳೂ ಸರಿ ಯಾಗಲಾರವಷ್ಟೆ. ಅಂತೆಯೇ ನಿಮಗೆ ಈ ವಾರದಲ್ಲಿ ಜ್ವರ, ಅಜೀರ್ಣಸಂಬಂಧವಾದ ರೋಗಗಳು ಹೆಚ್ಚುವವು. ಆ ಭಾಗದಲ್ಲಿ ಬಹಳ ಜಾಗರೂಕತೆಯಿಂದಿರಬೇಕು. ದೇಶಾಂತರವಾಸಿಗಳಾದವ ಇನ್ನಿತರ ಅನೇಕ ಮಿತ್ರರ ಭೇಟಿಯಾಗುವುದು. ಇನ್ನು ತತ್ಕಾಲದಲ್ಲಿ ಅಂದರೆ ಕಾರ್ಯವನ್ನು ನಿರ್ವಹಿಸಲೋಸುಗ ಆಗಾಗ ನಿಮಗೆ ಅನೇಕರು ಮಿತ್ರರಾದಾರು. ಆದರೆ ಇವರನ್ನೇ ನೀವು ನಂಬಿಕೊಂಡಿದ್ದರೆ ಮಾತ್ರ ಖಂಡಿತವಾಗಿಯೂ ಹೊಂಡಕ್ಕೆ ಬೀಳುವಿರಿ. ಸ್ವಯಂಕಾರ್ಯದಕ್ಷರಾದ ನೀವು ಪರರನ್ನಾಶ್ರಯಿಸುವುದೊಳ್ಳೆತಲ್ಲವು. ವಾರಾದಿಗಿಂತಲೂ ಮುಂದಿನ ದಿನಗಳು ಬಹಳ ಕಷ್ಟದಾಯಕಗಳಾಗಿವೆ.

**ಸಿಂಹ:--**

ಗೃಹಕಲಹಗಳು ದಿನೇ ದಿನೇ ವೃದ್ಧಿಯನ್ನೈದಿ ಸೋದರರೊಳಗೆ ಮನಸ್ತಾಪವುಂಟಾಗುವುದು. ನಿಮ್ಮ ಕುಟುಂಬದಲ್ಲಿ ನೀವೊಬ್ಬರೇ ಒಂದು ಪಾರ್ಟಿ, ಇತರ ರೆಲ್ಲರೂ ಅಂದರೆ ಸ್ವಸ್ತ್ರೀಪುತ್ರರಾದಿಯಾಗಿ ಒಂದು ಪಾರ್ಟಿ ಯಾಗುವರು. ಈ ಕಾರಣದಿಂದಾಗಿ ನಿಮಗಾವ ತರದ ಸುಖವೂ ಇಲ್ಲದಾಗುವದು. ಕೆಲವೊಮ್ಮೆ ಮಾನಹಾನಿಯೂ ಕೂಡ ಸಂಭವಿಸೀತು. ಇಷ್ಟಾದರೂ ದೇವತಾನುಗ್ರಹವು ನಿಮಗಿರುವುದರಿಂದ ಅನೇಕರೀತಿಯ ಜನರಿಂದ ನಿಮಗೆ ಧನಲಾಭವಾಗುವುದು. ಕೆಲವರು ನಿಮ್ಮ ಆಜ್ಞಾಧಾರಿಗಳಾಗಿ ತ್ರಿಕರಣಶುದ್ಧಿಯಿಂದ ಕಾರ್ಯಮಾಡುವರು. ಇವರಿಂದಾಗಿ ನಿಮಗೆ ಸ್ವಲ್ಪ ಮನಸ್ಸಿಗೆ ತೃಪ್ತಿಯಿಹುದು. ವಾರಾಂತ್ಯದ ೩ ದಿನಗಳು ಆಕಸ್ಮಿಕ ತೊಂದರೆ, ಅನಿಷ್ಟ ದಾಯಕಗಳಾಗಿರುವುದರಿಂದ ಮೈಮರೆತಿರಲಾಗದು.

**ಕನ್ಯಾ:--**

ಬಹುಮತಗ್ರಹರು ನಿಮಗೆ ಪ್ರತಿಕೂಲರಾಗಿ ನಿಂತಿರುವುದರಿಂದ ಸರ್ವತ್ರ ನಿಮಗೆ ಪ್ರತಿಕೂಲಗಳೇ ಹೊರತು ಅನುಕೂಲ ಸಂದರ್ಭವೆಂಬುದು ಸ್ವಪ್ನದೆಣಿಕೆಯಂತೆಯೇ ಸರಿ. ಇದು ನಿಮ್ಮ ಸ್ವಂತಕ್ಕೆ ಹೊರತು ಕುಟುಂಬಕ್ಕೆ ಅನ್ವಯಿಸಲಾರದು. ಕೋರ್ಟುವಗೈರೆಗಳ ವ್ಯವಹಾರಗಳಲ್ಲಿ ಹೆಚ್ಚಾಗಿ ಪರಾಜಯವೇ ನಿಶ್ಚಯ. ಶತ್ರುಗಳ ಬಲೆಗೆ ಸಿಲುಕಿದ ನಿಮಗೆಮನೋವ್ಯಥೆಯು ಅತ್ಯಧಿಕವಾಗಿ ನಿದ್ರಾಭಂಗವಾಗುವುದು. ಇದರಿಂದ ಪಿತ್ತವಿಕಾರವು ಹೆಚ್ಚಿ ತತ್ಸಂಬಂಧವಾದ ಶಾರೀರಕ ದೋಷವು ವೃದ್ಧಿಯಾಗುವುದು. ಕೆಲವೊಂದು ದೋಷದಾಯಕವಾದ ಕಾರ್ಯಗಳಿಂದ ಪಾರುಗಾಣಲು ಊರನ್ನೇ ಬಿಡುವುದು ಮಾತ್ರ ವಲ್ಲದೆ ಹೆಚ್ಚಾಗಿ ಧನವ್ಯಯಿಸಬೇಕಾಗುವುದು. ಅಂತೂ ಖರ್ಚಿನ ಮಟ್ಟಿಗೆ ಕೈಕಟ್ಟದಿರುವುದೇ ಒಂದು ದೊಡ್ಡ ಪುಣ್ಯವೆನ್ನಬೇಕು. ವಾರಾದಿಯ ಎರಡು ದಿನಗಳಲ್ಲಿ ಅಪಜಯ, ಶೋಕ, ಮಾರ್ಗಾಯಾಸಗಳು ಹೆಚ್ಚುವುವು.

**ತುಲಾ:--**

ನಿಮಗೆ ಸಂಭವಿಸತಕ್ಕ ಗುಣದೋಷಗಳಲ್ಲಿ ಗುಣವೇ ಒಂದುತೂಕ ಹೆಚ್ಚಿರುವುದು. ನಿಮ್ಮ ಮನಸು ಬಹಳ ಅಧೀರವಾಗಿರುವುದರಿಂದ ಯಾರಲ್ಲೂ ನಿಮಗೆ ವಿಶ್ವಾಸವು ಸ್ಥಿರವಾಗಿ ಉಳಿಯುವುದಿಲ್ಲವು. ಆಕಸ್ಮಿಕ ಅಪಘಡಗಳಿಂದ ಗಾಯವಗೈರೆಗಳು ಮತ್ತು ಚರ್ಮರೋಗವಾದ ಕಜ್ಜಿಹುಣ್ಣುಗಳು ತೋರಿಬಂದಾವು. ಅಲ್ಲದೆ ಇತರ ಭಾಗಗಳಲ್ಲ ಯಾವುದಕ್ಕೂ ಹಾನಿಯಿಲ್ಲವು. ಪಶ್ವಾದಿ ಸಮಸ್ತ ಗೃಹಸಂಪತ್ತುಗಳು ಉತ್ತಮ ರೀತಿಯಲ್ಲಿರುವವು. ಸ್ತ್ರೀಸುಖವು ತೃಪ್ತಿಕರವಾಗಿರುವುದು. ಸಾಂಪತ್ತಿಕ ಸ್ಥಿತಿಯು ಬಹಳ ಮಟ್ಟಿಗೆ ಸುಧಾರಿಸಿರುವುದು. ವಿರೋಧಿಗಳು ದಿವಾಭೀತ (ಗೂಗೆ) ಗಳಂತೆ ಅಡಗಿಕೊಂಡೇ ಇರುವರು. ಮನಸ್ಸು ನಿಮ್ಮನ್ನು ಅಕಾರ್ಯಕ್ಕೆ ಹೆಚ್ಚಾಗಿ ಪ್ರೇರೇಪಿಸುವುದರಿಂದ ಅದನ್ನು ಬಿಗಿಹಿಡಿದು ಹಿಡಿತದಲ್ಲಿಟ್ಟುಕೊಳ್ಳಿರಿ. ವಾರಾಂತ್ಯವು ಉತ್ತಮವಾಗಿರುವುದು.

**ವೃಶ್ಚಿಕ:--**

ಕೆಲವಂಶದ ಮಟ್ಟಿಗೆ ನಿಮಗೀವಾರದಲ್ಲಿ ಒಳ್ಳೆಯದು ತೋರಿಬಂದರೂ ಹೆಚ್ಚಿನ ಭಾಗಗಳು ಹಾನಿಕರಗಳಾಗಿವೆ. ಸಂಸಾರಿಕ ತಾಪತ್ರಯಗಳು ಬಹಳವಾಗಿ ಪೀಡಿಸಿದರೂ ತಾತ್ಕಾಲಿಕ ಖರ್ಚಿನಮಟ್ಟಿಗೆ ಹಣವೊದಗುವುದು. ಸಾಮಾನ್ಯತಃ ಸರ್ವರೊಡನೆಯೂ ನಿಮಗೆ ವಿರೋಧವಾದರೂ, ವಿಶೇಷತಃ ಸ್ತ್ರೀಯರಲ್ಲಿ ಕಲಹವು ಅಧಿಕವಾಗಿ ಬಹಳ ಅನಿಷ್ಟಗಳಿಗೆ ಗುರಿಯಾಗಬೇಕಾಗುವುದು. ಸರ್ವರಿಂದಲೂ ತ್ಯಕ್ತರಾದ ನಿಮಗೆ ಸಂತಾಪದಾಯಕವಾದ ವ್ಯಾಧಿಪೀಡೆಯು ಬೇರೆ ತಪ್ಪುವಂತಿಲ್ಲ. ಖರ್ಚುಕಡಿಮೆಯಾಗುವಂತೆಯೂ ಇಲ್ಲ. ವಾರಾದಿಯ ಎರಡು ದಿನಗಳನ್ನು ಬಿಟ್ಟು ಉಳಿದ ದಿನಗಳು ಬಹಳ ಕಲಹಕಾರಿಗಳೂ ಶೋಕದಾಯಕಗಳೂ ಆಗಿವೆ.

**ಧನು:—**

ಪೂರ್ವೋಕ್ತ ರಾಶಿಯವರಿಗಿಂತ ನಿಮ್ಮ ಸ್ಥಿತಿಯು ಕೊಂಚಮಟ್ಟಿಗೆ ಸುಧಾರಿಸುವುದು. ಶತ್ರುಗಳು ಹಲವೊಮ್ಮೆ ನಿಮ್ಮ ಸುಖಕ್ಕೆ ಹಾನಿಯನ್ನು ಮಾಡುವುದು ಮಾತ್ರವಲ್ಲದೆ ಕೈಕೊಂಡ ಕಾರ್ಯಗಳಿಗೂ ವಿಘ್ನವನ್ನು ಮಾಡಿಯಾರು- ನಿಮ್ಮ ವಕ್ರಬುದ್ಧಿಯು ಕೆಲವರಿಗೆ ಸರಿದೋರದೆ ನಿಷ್ಠುರಕ್ಕೆ ಈಡಾಗುವಿರಿ. ಆರೋಗ್ಯವೂ ಸರಿಯಿರಲಾರದು. ಆದರೂ ನೀವು ನ್ಯಾಯಪಕ್ಷಪಾತಿಗಳಾಗಿರುವುದರಿಂದ ಮಿತ್ರ ಜನರಿಂದಾಗಿ ಅನೇಕ ಅನುಕೂಲತೆಗಳನ್ನೂ ಧನಲಾಭವನ್ನೂ ಅಭಿವೃದ್ಧಿಯನ್ನೂ ಹೊಂದುವಿರಿ- ಉದ್ಯೋಗದಲ್ಲಿ ಕೋರ್ಟು ವಗೈರೆಗಳ ಕಾರ್ಯಗಳಲ್ಲಿ ವ್ಯಾಪಾರಾದಿಗಳಲ್ಲಿ ಕೂಡ ಫಲಿತಾಂಶವು ಯೋಗ್ಯರೀತಿಯಲ್ಲಿ ದೊರೆಯುವುದು. ವಾರದ ಆದ್ಯಂತ ಭಾಗಗಳಲ್ಲಿ ಧನವ್ಯಯವೂ ಕಾರ್ಯಹಾನಿಯೂ ಹೆಚ್ಚಾಗುವುದು.

**ಮಕರ:—**

ಸಾಂಪತ್ತಿಕ ಸ್ಥಿತಿಯೂ ದೇಹಸುಖವೂ ಬಹಳ ಮಟ್ಟಿಗೆ ಉತ್ತಮ ರೀತಿಯಲ್ಲೇ ಇರುವುದರಿಂದ ನಿಮಗೀ ವಾರವು ಹೆಚ್ಚಿನಂಶ ಶುಭದಾಯಕವಾಗಿರುವುದು. ಸಾರ್ವಜನಿಕ ಕ್ಷೇತ್ರದಲ್ಲಿ ಯಶೋಲಾಭವಾಗುವುದು. ಮಿತ್ರಸಹಾಯವೂ ಚೆನ್ನಾಗಿದ್ದ ಕಾರಣ ಯಾವ ಕಾರ್ಯವನ್ನೂ ತಡೆಯಿಲ್ಲದೆ ಕೊನೆಗಾಣಿಸುವಿರಿ. ಶತ್ರುಗಳ ಬೆದರಿಕೆಯು ಯಾವತ್ತೂ ಇಲ್ಲವೆಂದು ಹೇಳಬಹುದು. ವ್ಯಯಕ್ಕಿಂತಲೂ ಆಯವು ಅಧಿಕವಾಗಿರುವುದರಿಂದ ಕೈಯಲ್ಲಿ ನಾಲ್ಕು ಕಾಸು ಯಾವಾಗಲೂ ಇರುವುದು. ಗೃಹ ವಿಷಯದಲ್ಲಿ ಏನೊಂದು ಕೊರತೆಯಿಲ್ಲವು. ಆದರೂ ಅದೊಂದು ಅವಾಚ್ಯವಾದ ಮನೋರೋಗವು ನಿಮ್ಮನ್ನು ಸದಾ ಪೀಡಿಸಬಹುದು. ಮಾತಿನಲ್ಲಿ ನಿಷ್ಠುರತೆಯು ತೋರುವುದರಿಂದ ಕೆಲವರೊಡನೆ ಕಲಹವಾದೀತು. ತಾ. 29, 30 ಮತ್ತು 1ರಲ್ಲಿ ಮಾನಹಾನಿಯ ಚಿಹ್ನೆಗಳು ತೋರಿಬರುವುವು. ಆದ್ದರಿಂದ ಜಾಗರೂಕರಾಗಿರತಕ್ಕದ್ದು.

**ಕುಂಭ:—**

ಶುಭಾಶುಭ ಗ್ರಹರು ಸಮನಾಗಿರುವುದರಿಂದ ಸುಖದುಃಖಗಳೂ ಲಾಭನಷ್ಟಗಳೂ ಸಮಾನವಾಗಿ ಪರಿಣಮಿಸುವವು. ನಿಮ್ಮ ಕುಲಾಚಾರ ಧರ್ಮಗಳಲ್ಲಿ ಹೆಚ್ಚಿನ ಶ್ರದ್ಧಾಯುಕ್ತರಾದ ನಿಮಗೆ ಧನವಸ್ತುಗಳ ಲಾಭವಾಗುವುದು. ಕೈಗೊಂಡಕಾರ್ಯಗಳು ಜಯಶೀಲವಾಗಿ ಕೊನೆಗೊಂಡು ಮನೋರಥವು ಪೂರ್ತಿಯನ್ನೈದುವುದು. ಧನಜನ ಸಹಾಯವು ಉತ್ತಮ ರೀತಿಯಲ್ಲಿರುವುದು. ಆದರೆ ಅಶುಭರಿಂದಾಗಿ ದೇಹಾಲಸ್ಯವು ಅಧಿಕವಾಗಿ ಶರೀರವು ಕೃಶವಾದೀತು. ತತ್ಸಲುವಾಗಿಯೂ ಕೆಲವು ಕಾರ್ಯಗಳ ನಿರ್ವಾಹಕ್ಕಾಗಿಯೂ ಧನವ್ಯಯಿಸುವಿರಿ. ಉದ್ಯೋಗದಲ್ಲಿ ಅಧಿಕಾರಿಗಳ ಭೀತಿಗೆ ಒಳಗಾಗುವಿರಿ. ಸಂಪಾದಿಸಿದ ದ್ರವ್ಯವು ಕೂಡಲೇ ವ್ಯಯವಾಗುವುದು. ತಾ. 27. 28 ಮತ್ತು 2. 3ರಲ್ಲು ಕೆಲವೊಂದು ಭಾಗಗಳಲ್ಲಿ ಧನವ್ಯಯವೂ ಕಾರ್ಯಹಾನಿಯೂ ಆಗುವುದು.

**ಮೀನ:—**

ಉದ್ಯಮಶೀಲರಿಗೆ ಸಾಕಷ್ಟು ಧನಲಾಭವಾಗುವುದು. ಮಿತ್ರರೂ ಅಧಿಕವಾಗುವರು. ಸಂಪನ್ನಳಾದ ಸ್ತ್ರೀಯೂ ನಿಮ್ಮ ವಶಳಾಗುವಳು. ಸಂಸಾರಿಕ ವಿಷಯಕಗಳಾದ ತೊಂದರೆಗಳು ಬರಲಾರವು. ಇಷ್ಟಿದ್ದರೂ ಶತ್ರುಗಳ ಪೀಡೆಯೂ ರೋಗಬಾಧೆಯೂ ನಿಮಗೆ ಹೆಚ್ಚಾಗಿ ಉಪದ್ರವಿಸುವುದರಿಂದ ಮನೋವ್ಯಥೆಯಿಂದ ಪೀಡಿತರಾಗುವಿರಿ. ಕೆಲವೊಂದು ಸಂದರ್ಭದಲ್ಲಿ ಪ್ರಯಾಣ ಮಾಡಬೇಕಾಗಿ ಬಂದು ಹೆಚ್ಚಿನ ಕಷ್ಟನಷ್ಟಗಳಿಗೆ ಗುರಿಯಾಗುವಿರಿ. ಲೇವಾದೇವಿ ವಿಷಯಗಳಲ್ಲಿ ಕಲಹವು ಹೆಚ್ಚಿ ಕೋರ್ಟುಮನೆಗೆ ತಿರುಗುವ ಪ್ರಸಂಗ ಒದಗುವುದು. ಶರೀರಕ್ಕೆ ಅಕಸ್ಮಾತ್ತಾಗಿ ಕತ್ತಿ ಚೂರಿ ಮೊದಲಾದ ಶಸ್ತ್ರವಿಶೇಷಗಳಿಂದಾಗಲೀ ಬೆಂಕಿಯಿಂದಾಗಲಿ ಪೀಡೆಯುಂಟಾಗುವುದು. ತಾ. 29. 30 ಮತ್ತು 1 ಇವುಗಳಲ್ಲಿ ಖರ್ಚು ಆಯವನ್ನು ಮಿಕ್ಕಿ ಹೋಗುವುದು.

— **ಬಾಲಭಾಸ್ಕರ.**

## ನನಗರಿಯದು-ನಿಮಗೆ



**-ಶಿವಮೊಗ್ಗೆಯು ಅರಳುವುದೇ?**

# ಅಂತರಂಗ ಸ್ಪರ್ಧೆ

ನಂ. ೧.

## ಪ್ರಥಮ ಬಹುಮಾನ:- ರೂಪಾಯಿ ೨೫

**ದ್ವಿತೀಯ ಬಹುಮಾನ:**- ಒಂದು ತಪ್ಪಿರುವ ಪ್ರತಿಯೊಂದು ಉತ್ತರಕ್ಕೆ "Paryayam Souvenir" ಎಂಬ ಸಚಿತ್ರ ಪುಸ್ತಕ.

**ತೃತೀಯ ಬಹುಮಾನ:**-ಎರಡು ತಪ್ಪಿರುವ ಪ್ರತಿಯೊಂದು ಉತ್ತರಕ್ಕೆ "ಪುರಂದರದಾಸರ ಕೀರ್ತನೆ.

**ಸ್ಪರ್ಧೆಯಲ್ಲಿ ಭಾಗವಹಿಸುವವರಿಗೆ ಸೂಚನೆಗಳು:—**

ಈ ಸ್ಪರ್ಧೆಯ ಸರಿಯಾದ ಉತ್ತರವು 'ಅಂತರಂಗ'ದ ಸಂಪಾದಕರ ಬಳಿ ಮೊಹರು ಮಾಡಿ ಇಡಲಾಗಿದೆ. ಅದಕ್ಕೆ ಪ್ರತಿ ಅಕ್ಷರವೂ, ಸರಿಹೋಲತಕ್ಕ ಉತ್ತರಕ್ಕೆ ಮೊದಲನೆ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು. ತಪ್ಪಾದ ಪ್ರತಿಯೊಂದು ಪದವೂ ಒಂದೊಂದು ತಪ್ಪಿನಂತೆ ಭಾವಿಸಲಾಗುತ್ತದೆ. ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾಗಿದ್ದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು. ಬಹುಮಾನಗಳನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದುದು. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ. ಪ್ರತಿ ಉತ್ತರಕ್ಕೂ ಪ್ರವೇಶ ಧನ ನಾಲ್ಕಾಣೆ. ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಒಂದುರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದು. ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಅಥವಾ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು. ಉತ್ತರವನ್ನು ಬರೆಯತಕ್ಕವರು ದಶಂಬರ ೧೦ ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ. ಸರಿಯಾದ ಉತ್ತರವನ್ನು ದಶಂಬರ ೧೮ರ ಅಂತರಂಗದಲ್ಲಿ ಪ್ರಕಟಿಸಲಾಗುತ್ತದೆ. ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು. ಈ ಕೂಪನುಗಳು ಈ ಸಂಚಿಕೆಯ ಮೊದಲ್ಗೊಂಡು ಅಂತರಂಗದ ನಾಲ್ಕು ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ. ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.

ಉತ್ತರಗಳು ಕೆಳಗಿನ ವಿಳಾಸಕ್ಕೆ ಕಳುಹಿಸಲ್ಪಡಬೇಕು.

**ಮೆನೇಜರ್, 'ಅಂತರಂಗ ಸ್ಪರ್ಧೆ', ಅಂತರಂಗ, ಉಡುಪಿ.**

**ವಿ. ಸೂ:** ಈ ಸ್ಪರ್ಧೆಯಲ್ಲಿ ಸಪ್ಲೈ ಏಜನ್ಸಿ, ಲಿಮಿಟೆಡ್, ಉಡುಪಿ—ಇದರ ಯಾವ ನೌಕರರಿಗೂ ಭಾಗವಹಿಸಲೆಡೆಯಿಲ್ಲ.

**ಸ್ಪರ್ಧೆಯನ್ನು ಮುಂದಿನ ಪುಟದಲ್ಲಿ ನೋಡಿರಿ.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

| | | | | | | | | |
|---|---|---|---|---|---|---|---|---|
| ೧ | ೨ | ದ ೩ | ೪ | ೫ | ■ | ೬ | ೭ | ನೆ ೮ |
| ೯ | ■ | ೧೦ | ■ | ೧೧ | ೧೨ | ೧೩ | ■ | ೧೪ |
| ೧೫ | ೧೬ | ೧೭ ಹ | ೧೮ | ■ | ೧೯ | ■ | ೨೦ | ೨೧ |
| ■ | ೨೨ | ೨೩ | ■ | ■ | ■ | ೨೪ | ೨೫ | ■ |
| ೨೬ | ■ | ೨೭ | ೨೮ | ■ | ೨೯ | ೩೦ | ಮ ೩೧ | ೩೨ |
| ೩೩ | ೩೪ | ■ | ೩೫ | ೩೬ | ಕೈ ೩೭ | ■ | ೩೮ | ■ |
| ೩೯ | ಡಾ ೪೦ | ೪೧ | ೪೨ | ■ | ೪೩ | ೪೪ | ದೆ ೪೫ | ■ |
| ೪೬ | ■ | ೪೭ | ■ | ತ ೪೮ | ೪೯ | ಣ ೫೦ | ■ | ಜ ೫೧ |
| ೫೨ | ೫೩ | ೫೪ | ■ | ೫೫ | ■ | ೫೬ | ೫೭ | ನ ೫೮ |

## ಎಡದಿಂದ ಬಲಕ್ಕೆ.

೧ರಿಂದ ೫ . . . . ವಾದ ಮಾತುಗಳಿಂದ ಇತರರಿಗೆ ಸಂತೋಷವಾಗುತ್ತದೆ

೬ ,, ೮ . . . . ಗಳನ್ನು ಮಾಡುವವರಿಗೆ ತುಂಬಾ ವಿಚಾರ ಶಕ್ತಿಯಿರಬೇಕಾಗುತ್ತದೆ.

೧೧ ,, ೧೩ ಸವಿ.

೧೫ ,, ೧೮ . . . ಉಡಿಗೆ ತೊಡಿಗೆಗಳಿಗಾಗಿ ಸ್ತ್ರೀಯರು ಹಂಬಲಿಸುತ್ತಾರೆ.

೨೦ ,, ೨೧ ಇದೊಂದನ್ನು ಬಿಟ್ಟರೆ ಹೊಟ್ಟೆತುಂಬಿಸಿಕೊಳ್ಳುವುದು ಕಷ್ಟವಲ್ಲ.

೨೨ ,, ೨೩ ಅತಿ . . . ಯಾಗಿರುವ ಪದಾರ್ಥಗಳನ್ನು ತಿಂದರೆ ಕೆಲವೊಮ್ಮೆ ಅನಾರೋಗ್ಯವುಂಟಾಗುತ್ತದೆ.

೨೪ ,, ೨೫ ದಟ್ಟ . . . ಗಳಲ್ಲಿ ಸಂಚರಿಸುವಾಗ ಜಾಗ್ರತೆಯಿಂದಿರಬೇಕಾಗುತ್ತದೆ.

೨೭ ,, ೨೮ ಋಷಿಗಳು ಇದರ ಬಲದಿಂದಲೇ ಜ್ಞಾನವನ್ನು ಸಂಪಾದಿಸುತ್ತಿದ್ದರು.

೨೯ ,, ೩೨ ನಲ್ಲೆಯರ . . . . ತುಟಿಗಳ ಕುರಿತು ಕವಿಗಳು ತುಂಬಾ ವರ್ಣಿಸಿದ್ದಾರೆ.

೩೩ ,, ೩೪ ಮ್ಯೂನಿಕ್ ಒಪ್ಪಂದದಲ್ಲಿ ರಷ್ಯವು . . . ವಹಿಸಲಿಲ್ಲ.

೩೫ ,, ೩೭ ಆಧುನಿಕ ಕನ್ನಡ ಕವಿತೆಯ ಛಂದಸ್ಸುಗಳೆಲ್ಲಾ ಇವರ ಸೃಷ್ಟಿಗಳು.

೩೯ ,, ೪೨ ಆರು ಆಗಮಗಳು.

೪೩ ,, ೪೫ ಡಿ. ವೆಂಕಟಾಚಾರ್ಯರ ಕಾದಂಬರಿಗಳಲ್ಲೊಂದರ ಹೆಸರು.

೪೮ ,, ೫೦ ಜವಾಹರಲಾಲ ನೆಹರುಗಳು ಹಿಂದುಸ್ಥಾನದ . . . ರ ಧುರೀಣರಾಗಿದ್ದಾರೆ.

೫೨ ,, ೫೪ ಇವರ ಸಂಸ್ಕೃತಿಯು ಆರ್ಯರ ಸಂಸ್ಕೃತಿಗಿಂತಲೂ ಪ್ರಾಚೀನವಾದುದೆಂದು ಹೇಳುತ್ತಾರೆ.

೫೬ ,, ೫೮ ದುಷ್ಟರ . . . ಕ್ಕಾಗಿ ಪರಮಾತ್ಮನು ಅವತರಿಸುತ್ತಾನಂತೆ.

## ಮೇಲಿಂದ ಕೆಳಗೆ

೧ ,, ೧೫ ವಿಶ್ರಾಂತಿ.

೨೬ ,, ೫೨ ಈಗಿನ ರಾಷ್ಟ್ರಪತಿ.

೩೪ ,, ೪೦ ಗತಕಾಲಂ ಲಯಕಾಲವಾಯ್ತು ನಿನಗಿನ್ನಾಯ್ತುಂತ್ಯಕಾಲಂ . . . .

೩ ,, ೨೭ ಮುಗುಳು ನಗೆ.

೪೧ ,, ೫೪ ವಿಷ್ಣುವಿನ ವಾಹನ.

೨೮ ,, ೪೨ ಶ್ರೇಷ್ಠ.

೫ ,, ೧೧ ಇವನ ಲೋಕಕ್ಕೆ ಯಾರೂ ಹೋಗಲೊಪ್ಪುವುದಿಲ್ಲ.

೪೮ ,, ೫೫ ಕರೆ.

೧೨ ,, ೧೯ ಯುದ್ಧ.

೨೯ ,, ೪೯ ಇದು ಇಲ್ಲದಿದ್ದರೆ ಬೇಸಾಯ ಮಾಡುವುದು ಬಹಳ ಕಷ್ಟ.

೬ ,, ೧೩ ವಧುವಿನ . . . ಹಿಡಿವವನಿಗೆ ವರನೆನ್ನುತ್ತಾರೆ.

೨೪ ,, ೩೦ ವರನಿಗೆ ಕೈಕೊಡುವವಳಿಗೆ ಹೀಗೆನ್ನುತ್ತಾರೆ

೪೪ ,, ೫೬ . . . . ಹೆದರಿಕೆಯಿಂದ ಚೇಂಬರ್ಲೇನರು ಹಿಟ್ಲರನಿಗೆ ತಲೆಬಾಗಿದರು.

೨೦ ,, ೪೫ ದೇಹವನ್ನು ವಿಕ್ರಯಿಸಿಕೊಳ್ಳುವ ಸ್ತ್ರೀಯರಿಗೆ ಇದಿರುವುದಿಲ್ಲ.

೮ ,, ೨೧ ಹೊಸತು.

೫೧ ,, ೫೮ . . . ರಿಲ್ಲದ ಊರಿಗೆ ಹಾಳೂರೆನ್ನುತ್ತಾರೆ.

(ಸ್ಪರ್ಧೆಯ ಕೂಪನುಗಳಿಗೆ ೪೫ನೆ ಪುಟ ನೋಡಿರಿ)

This Page is available for Advertisement. Rate Rs. 20/- [per insertion.]